ಪರಮದಯಾಮಯ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಇಪ್ಪತ್ತನೇ ಶತಮಾನದ ಜಗದ್ವಿಖ್ಯಾತ ವಿದ್ವಾಂಸ ಮೌ। ಸೈಯದ್ ಅಬುಲ್ ಅಲಾ ಮೌದೂದಿಯವರ 'ಖುತ್‌ಬಾತ್' ಎಂಬ ಗ್ರಂಥದ ನಾಲ್ಕನೆಯ ಭಾಗವಾದ 'ಹಕೀಕತೆ ಝಕಾತ್'ನ ಕನ್ನಡಾನುವಾದ ನಿಮ್ಮ ಕೈಯಲ್ಲಿದೆ. ಇದು ಲೇಖಕರು 1938ರಲ್ಲಿ ಅಂದಿನ ಅವಿಭಜಿತ ಪಂಜಾಬಿನ ಪಠಾಣ್ ಕೋಟ್‌ನ ಸಮೀಪದ ಗ್ರಾಮದ ಮುಸ್ಲಿಮರಲ್ಲಿ ಧಾರ್ಮಿಕ ಪ್ರಜ್ಞೆ ಮೂಡಿಸಲು ಮಾಡಿದ 'ಶುಕ್ರವಾರ ಪ್ರವಚನ'ಗಳ ಸಂಕಲನವಾಗಿದೆ. ಇಸ್ಲಾಮಿನ ಆಧಾರ ಸ್ತಂಭಗಳಾದ ಝಕಾತ್‌ನ ಅರ್ಥ ವ್ಯಾಪ್ತಿ ಮತ್ತು ಅದರ ಬೇಡಿಕೆಗಳನ್ನು ಸರಳವಾಗಿ ಉದಾಹರಣೆಗಳೊಂದಿಗೆ ಮನ ಮುಟ್ಟುವಂತೆ ವಿವರಿಸುವ ಶೈಲಿಯನ್ನು ಅವರು ಇದರಲ್ಲಿ ಅಳವಡಿಸಿದ್ದಾರೆ. ಅವರ 'ಶುಕ್ರವಾರ ಪ್ರವಚನ'ಗಳ ಇತರ ಭಾಗಗಳಾದ ಈಮಾನ್, ಇಸ್ಲಾಮ್, ನಮಾಝ್ ಮತ್ತು ಉಪವಾಸ ವ್ರತ, ಹಜ್ಜ್ ಮತ್ತು ಜಿಹಾದ್‌ಗಳೆಲ್ಲದರಲ್ಲೂ ಅವರು ಇದೇ ಶೈಲಿಯನ್ನು ಅನುಸರಿಸಿದ್ದಾರೆ. ಇಪ್ಪತ್ತನೇ ಶತಮಾನದಲ್ಲಿ ಉಪಖಂಡದಲ್ಲಿ ಇಸ್ಲಾಮೀ ನವೋತ್ಥಾನಕ್ಕೆ ಕಾರಣವಾದ ಅವರ ಬರಹದ ಪ್ರಭಾವ ಪೂರ್ಣತೆ ಈ ಸರಳ ಕೃತಿಯಲ್ಲೂ ವಾಚಕರ ಗಮನಕ್ಕೆ ಬಾರದೆ ಇರಲಾರದು.

ಈ ಕೃತಿ ವೈಯಕ್ತಿಕ ವಾಚನಕ್ಕೆ ಉಪಯುಕ್ತವಾಗಿರುವಂತೆಯೇ ಮಸೀದಿ, ಮದ್ರಸಾ ಮತ್ತು ಸಭೆಗಳಲ್ಲಿ ಪಠಿಸುವುದಕ್ಕೂ ಉಪಯುಕ್ತವಾಗಿದೆ. ಉರ್ದು ಮತ್ತು ಇತರ ಅನುವಾದಿತ ಭಾಷೆಗಳಲ್ಲಿ ಲಕ್ಷಾಂತರ ಜನರಲ್ಲಿ ಜನಪ್ರಿಯವಾಗಿರುವ ಈ ಕೃತಿ ಕನ್ನಡಿಗರಾದ ಮುಸ್ಲಿಮ್-ಮುಸ್ಲಿಮೇತರರೆಲ್ಲರಿಗೂ ಉಪಯುಕ್ತವಾಗಲೆಂದು ಇದನ್ನು ಸಮರ್ಪಿಸುತ್ತಿದ್ದೇವೆ. ಇದು ಈ ಪುಸ್ತಕದ ಐದನೆಯ ಆವೃತ್ತಿ. ಮರ್‌ಹೂಮ್ ಅಬ್ದುಲ್ ಗಫ್ಫಾರ್ ಸಾಹೇಬರು ಇದನ್ನು ಸರಳ ಸುಂದರವಾಗಿ ಕನ್ನಡೀಕರಿಸಿದ್ದಾರೆ. ಇದನ್ನು ಆಗು ಮಾಡಿದ ಸರ್ವಶಕ್ತನಾದ ಅಲ್ಲಾಹನಿಗೆ ಸರ್ವಸ್ತುತಿ. ಅಂತೆಯೇ ಈ ನಿಟ್ಟಿನಲ್ಲಿ ಸಹಕರಿಸಿದ ಎಲ್ಲರಿಗೂ ನಾವು ಋಣಿಯಾಗಿದ್ದೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ


- ಝಕಾತ್
- ಝಕಾತ್‌ನ ವಾಸ್ತವಿಕತೆ
- ಸಾಮೂಹಿಕ ಜೀವನದಲ್ಲಿ ಝಕಾತಿನ ಸ್ಥಾನ
- 'ಇನ್‌ಫಾಕ್'ನ ಸಾಮಾನ್ಯ ವಿಧಿಗಳು
- ಝಕಾತಿನ ನಿರ್ದಿಷ್ಟ ವಿಧಿಗಳು

# ಝಕಾತ್

## ಝಕಾತ್‌ನ ಮಹತ್ವ

ಮುಸ್ಲಿಮ್ ಬಾಂಧವರೇ,

ನಮಾಝಿನ ಬಳಿಕ ಇಸ್ಲಾಮಿನ ಅತಿ ಪ್ರಮುಖ ಆಧಾರ ಸ್ತಂಭವು ಝಕಾತ್ ಆಗಿದೆ. ಸಾಮಾನ್ಯವಾಗಿ ಇಬಾದತ್(ಆರಾಧನೆ)ಗಳ ಶ್ರೇಣಿಯಲ್ಲಿ ನಮಾಝಿನೊಂದಿಗೆ ಉಪವಾಸದ ಹೆಸರೇ ಕೇಳಿ ಬರುವುದರಿಂದ ನಮಾಝಿನ ಅನಂತರದ ಸ್ಥಾನ ಉಪವಾಸಕ್ಕೆಂದೇ ಜನರು ತಿಳಿದುಕೊಂಡಿದ್ದಾರೆ. ಆದರೆ ಇಸ್ಲಾಮಿನಲ್ಲಿ ನಮಾಝಿನ ಬಳಿಕ ಝಕಾತ್‌ಗೆ ಅತಿ ಹೆಚ್ಚು ಮಹತ್ವವಿರುವುದೆಂದು ಕುರ್‌ಆನ್‌ನಿಂದ ನಮಗೆ ಸ್ಪಷ್ಟವಾಗುತ್ತದೆ. ಇವೆರಡೂ ಇಸ್ಲಾಮಿನ ಭವ್ಯ ಕಟ್ಟಡದ ಅತ್ಯಂತ ಬಲವಾದ ಆಧಾರ ಸ್ತಂಭಗಳು. ಇವುಗಳು ಸರಿದು ಹೋದರೆ ಇಸ್ಲಾಮ್ ನಿಲ್ಲಲಾರದು.

## ಝಕಾತ್‌ನ ಅರ್ಥ

ಝಕಾತ್‌ನ ಅರ್ಥ, ನೈರ್ಮಲ್ಯ ಮತ್ತು ಶುದ್ಧೀಕರಣ ಎಂದಾಗಿದೆ. ತನ್ನ ಸಂಪತ್ತಿನಿಂದ ಒಂದಂಶವನ್ನು ಪ್ರತ್ಯೇಕಿಸಿ ಬಡವರಿಗೆ ಕೊಡುವುದನ್ನು 'ಝಕಾತ್' ಎನ್ನುತ್ತಾರೆ. ಏಕೆಂದರೆ ಈ ರೀತಿಯಿಂದ ಆ ಧನವೂ, ಅದರೊಂದಿಗೆ ಆ ಧನಿಕನ ಅಂತಃಕರಣವೂ ಶುದ್ಧವಾಗುತ್ತದೆ. ದೇವದತ್ತವಾದ ಧನದಿಂದ ದೇವನ ದಾಸರ ಪಾಲನ್ನು ತೆಗೆದು ಕೊಡದವನ ಧನವೂ ಅಶುದ್ಧ, ಅವನ ಅಂತಃಕರಣವೂ ಕೊಳಕು, ಏಕೆಂದರೆ ಅವನ ಅಂತಃಕರಣದಲ್ಲಿ ಕೃತಘ್ನತೆ ತುಂಬಿ ಕೊಂಡಿದೆ. ಅವನು ತನಗೆ ನಿಜವಾದ ಅಗತ್ಯಕ್ಕಿಂತ ಹೆಚ್ಚು ಸಂಪತ್ತನ್ನು ನೀಡಿ ತನ್ನ ಮೇಲೆ ಅನುಗ್ರಹ ತೋರಿದ ದೇವನ ಋಣ ಸಂದಾಯ ಮಾಡಲಿಕ್ಕೂ ಮನಸ್ಸು ನೋಯುವಷ್ಟು ಜಿಪುಣನೂ ಸ್ವಾರ್ಥಿಯೂ ಧನಾರಾಧಕನೂ ಆಗಿದ್ದಾನೆ. ಇಂಥವನು ಈ ಜಗತ್ತಿನಲ್ಲಿ ದೇವ ಸಂಪ್ರೀತಿಗಾಗಿ ಏನಾದರೂ ಸತ್ಕಾರ್ಯವನ್ನು ಮಾಡುವನೆಂದೂ ತನ್ನ ಧರ್ಮ ಮತ್ತು ವಿಶ್ವಾಸ ಗಳಿಗಾಗಿ ಏನಾದರೂ ತ್ಯಾಗ ಮಾಡುವನೆಂದೂ ನಿರೀಕ್ಷಿಸುವುದಾದರೂ ಹೇಗೆ? ಇಂಥವನ ಹೃದಯವೂ ಕೊಳಕು, ಅವನು ಸಂಗ್ರಹಿಸಿಡುವ ಹಣವೂ ಕೊಳಕು.

## ಝಕಾತ್: ಒಂದು ಪರೀಕ್ಷೆ

ಅಲ್ಲಾಹನು 'ಝಕಾತ್' ಅನ್ನು ಕಡ್ಡಾಯಗೊಳಿಸುವ ಮೂಲಕ ಪ್ರತಿಯೊಬ್ಬನನ್ನೂ ಪರೀಕ್ಷೆಗೊಳಪಡಿಸಿದ್ದಾನೆ. ತನಗೆ ಬೇಕಾದುದಕ್ಕಿಂತ ಹೆಚ್ಚಿಗಿರುವ ಸಂಪತ್ತಿನಿಂದ ದೇವನ ಹಕ್ಕನ್ನು ಪ್ರತ್ಯೇಕಿಸಿ ಅದನ್ನು ಜನರ ಸಹಾಯಕ್ಕಾಗಿ ಕೊಡುವಾತನೇ ಅಲ್ಲಾಹನ ಸೇವಕ. ಅವನು ಮಾತ್ರ ಸತ್ಯವಿಶ್ವಾಸಿಗಳ ಕೂಟದವನೆಂದು ಪರಿಗಣಿಸಲ್ಪಡಲು ಅರ್ಹನಾಗಿರುತ್ತಾನೆ. ಅಲ್ಲಾಹನಿಗಾಗಿ ಇಷ್ಟು ಚಿಕ್ಕ ತ್ಯಾಗವನ್ನೂ ಸಹಿಸದ ಸಂಕುಚಿತ ಹೃದಯದವನು ಅಲ್ಲಾಹನಿಗೆ ನಿರುಪಯುಕ್ತನಾಗಿ ಬಿಡುತ್ತಾನೆ. ಅವನು ಸತ್ಯವಿಶ್ವಾಸಿಗಳ ಪಕ್ಷಕ್ಕೆ ಸೇರಲು ಅನರ್ಹ. ಅವನೊಂದು ಕೊಳೆತ ಅಂಗವಾಗಿದ್ದು ಅದನ್ನು ದೇಹದಿಂದ ಕಡಿದು ಬೇರ್ಪಡಿಸಿ ಬಿಡುವುದೇ ಸೂಕ್ತ. ಇಲ್ಲವಾದರೆ ಅದು ಇಡೀ ದೇಹವನ್ನೇ ಕೆಡಿಸಿ ಬಿಟ್ಟೀತು. ಆದುದರಿಂದಲೇ ಪ್ರವಾದಿವರ್ಯರ(ಸ) ಕಾಲಾನಂತರ ಅರಬರ ಕೆಲವು ಗೋತ್ರಗಳು ನಮಾಝ್ ಮಾಡುತ್ತಿದ್ದರೂ ಅಲ್ಲಾಹ್ ಮತ್ತು ಪ್ರವಾದಿಗಳ ಮೇಲೆ ವಿಶ್ವಾಸ ಪ್ರಕಟಿಸುತ್ತಿದ್ದರೂ ಅವರು ಝಕಾತ್ ಕೊಡುವುದನ್ನು ನಿರಾಕರಿಸಿದಾಗ ಹಝ್ರತ್ ಅಬೂಬಕರ್‌ರವರು(ರ) ಸತ್ಯನಿಷೇಧಿಗಳ ವಿರುದ್ಧ ಯುದ್ಧ ಮಾಡುವ ರೀತಿಯಲ್ಲಿಯೇ ಈ ಜನರ ವಿರುದ್ಧವೂ ಯುದ್ಧ ಮಾಡಿದರು. ಝಕಾತ್ ಇಲ್ಲದೆ ಹೋದರೆ ನಮಾಝ್, ಉಪವಾಸ ಮತ್ತು ಸತ್ಯವಿಶ್ವಾಸದ ಸಾಕ್ಷ್ಯಗಳೆಲ್ಲವೂ ನಿರರ್ಥಕ ಹಾಗೂ ಭರವಸೆಗೆ ಅಯೋಗ್ಯವಾಗಿ ಬಿಡುತ್ತವೆಂದು ಇದರಿಂದ ವ್ಯಕ್ತವಾಗುತ್ತದೆ. ಇದು ಎಲ್ಲ ಪ್ರವಾದಿಗಳ ಸಮುದಾಯಕ್ಕೆ ಕಡ್ಡಾಯವಾಗಿತ್ತು.

## ಎಲ್ಲ ಪ್ರವಾದಿಗಳ ಸಮುದಾಯಗಳ ಮೇಲೂ ಝಕಾತ್ ಕಡ್ಡಾಯವಾಗಿತ್ತು

ಪ್ರಾಚೀನ ಕಾಲದಿಂದಲೂ ಎಲ್ಲ ಪ್ರವಾದಿಗಳ ಸಮುದಾಯಗಳ ಮೇಲೂ ನಮಾಝ್ ಮತ್ತು ಝಕಾತ್‌ಗಳನ್ನು ಕಡ್ಡಾಯವಾಗಿ ವಿಧಿಸಲಾಗಿತ್ತು ಮತ್ತು ಯಾವ ಪ್ರವಾದಿಯ ಕಾಲದಲ್ಲಿಯೂ ಇಸ್ಲಾಮ್ ಧರ್ಮವು ಈ ಎರಡು ವಿಧಿಗಳಿಂದ ವಿರಹಿತವಾಗಿರಲಿಲ್ಲ ಎಂದು ಪವಿತ್ರ ಕುರ್‌ಆನನ್ನು ಅಧ್ಯಯನ ಮಾಡಿದಾಗ ನಿಮಗೆ ಕಂಡುಬರುವುದು. ಕುರ್‌ಆನಿನಲ್ಲಿ ಒಂದೆಡೆ ಪ್ರವಾದಿ ಇಬ್ರಾಹೀಮ್(ಅ) ಮತ್ತು ಅವರ ಸಂತಾನ ಪರಂಪರೆಯ ಪ್ರವಾದಿಗಳನ್ನು ಪ್ರಸ್ತಾಪಿಸಿದ ಬಳಿಕ ಈ ರೀತಿ ಹೇಳಲಾಗಿದೆ:

وَجَعَلْنٰهُمْ اَىِٕمَّةً يَّهْدُوْنَ بِاَمْرِنَا وَاَوْحَيْنَاۤ اِلَيْهِمْ فِعْلَ الْخَيْرٰتِ
وَاِقَامَ الصَّلٰوةِ وَاِيْتَاۤءَ الزَّكٰوةِ ۚ وَكَانُوْا لَنَا عٰبِدِيْنَ ۚ

"ನಾವು ಅವರನ್ನು ನಮ್ಮ ಅಪ್ಪಣೆಯಂತೆ ಮಾರ್ಗದರ್ಶನ ನೀಡುತ್ತಿದ್ದ ನಾಯಕರನ್ನಾಗಿ ಮಾಡಿದೆವು ಮತ್ತು ನಾವು ಅವರಿಗೆ 'ವಹ್ಯ್' ಮೂಲಕ ಸತ್ಕರ್ಮವೆಸಗುವ, ನಮಾಝ್

ಸಂಸ್ಥಾಪಿಸುವ ಮತ್ತು ಝಕಾತ್ ನೀಡುವ ಆದೇಶ ನೀಡಿದೆವು ಮತ್ತು ಅವರು ನಮ್ಮ ಉಪಾಸಕರಾಗಿದ್ದರು." (ಅಲ್ ಅಂಬಿಯಾ: 73)

ಪ್ರವಾದಿ ಇಸ್ಮಾಈಲ್‌ರ(ಅ) ಕುರಿತು ಕುರ್‌ಆನಿನಲ್ಲಿ ಹೀಗಿದೆ:

وَكَانَ يَأْمُرُ أَهْلَهُ بِالصَّلٰوةِ وَالزَّكٰوةِ وَكَانَ عِنْدَ رَبِّهِ مَرْضِيًّا ۝

"ಅವರು ತನ್ನ ಮನೆಯವರಿಗೆ ನಮಾಝ್ ಮತ್ತು ಝಕಾತ್‌ನ ಅಪ್ಪಣೆ ಕೊಡುತ್ತಿದ್ದರು ಮತ್ತು ತನ್ನ ಪ್ರಭುವಿನ ಬಳಿ ಓರ್ವ ಪ್ರೀತಿ ಪಾತ್ರ ವ್ಯಕ್ತಿಯಾಗಿದ್ದರು."

(ಮರ್ಯಮ್: 55)

ಹಝ್ರತ್ ಮೂಸಾರವರು(ಅ) ತಮ್ಮ ಸಮುದಾಯಕ್ಕಾಗಿ "ದೇವಾ! ನಮಗೆ ಇಹ-ಪರಗಳೆರಡರಲ್ಲೂ ವಿಜಯ ಪ್ರಧಾನ ಮಾಡು" ಎಂದು ಬೇಡಿದಾಗ ಅಲ್ಲಾಹನ ವತಿಯಿಂದ ಅದಕ್ಕೇನುತ್ತರ ಸಿಕ್ಕಿತು ಗೊತ್ತೇ?

عَذَابِيْٓ أُصِيْبُ بِهٖ مَنْ أَشَآءُ ۚ وَرَحْمَتِيْ وَسِعَتْ كُلَّ شَيْءٍ ۚ فَسَأَكْتُبُهَا

لِلَّذِيْنَ يَتَّقُوْنَ وَيُؤْتُوْنَ الزَّكٰوةَ وَالَّذِيْنَ هُمْ بِاٰيٰتِنَا يُؤْمِنُوْنَ ۝

"ನಾನು ಇಷ್ಟ ಬಂದವರಿಗೆ ಶಿಕ್ಷೆ ವಿಧಿಸುತ್ತೇನೆ. ಆದರೆ ನನ್ನ ಕರುಣೆಯು ಸರ್ವವನ್ನೂ ವ್ಯಾಪಿಸಿಕೊಂಡಿದೆ. ನಾನು ಅದನ್ನು ಆಜ್ಞೋಲ್ಲಂಘನೆ ಮಾಡದ, ಝಕಾತ್ ಕೊಡುವ ಮತ್ತು ನನ್ನ ನಿದರ್ಶನಗಳ ಮೇಲೆ ವಿಶ್ವಾಸವಿರಿಸುವವರಿಗಾಗಿ ಲಿಖಿತ ಗೊಳಿಸುವೆನು."

(ಅಲ್ ಅಲ್‌ರಾಫ್: 156)

ಹಝ್ರತ್ ಮೂಸಾರವರ(ಅ) ಜನಾಂಗವು ಸಂಕುಚಿತ ಮನೋವೃತ್ತಿಯದ್ದಾಗಿತ್ತು. ಇಂದಿನ ಯಹೂದಿಯರಂತೆ ಅವರೂ ಹಣವೆಂದರೆ ಜೀವ ಬಿಡುತ್ತಿದ್ದರು. ಆದುದರಿಂದಲೇ ಅಲ್ಲಾಹನು ಇಷ್ಟು ಉನ್ನತ ಮಟ್ಟದ ಪ್ರವಾದಿಯವರ ಪ್ರಾರ್ಥನೆಗೆ ಉತ್ತರವಾಗಿ, ನಿಮ್ಮ ಸಮುದಾಯವು ಝಕಾತ್ ವಿಧಿಯನ್ನು ಪಾಲಿಸಿದರೆ ಅದಕ್ಕೆ ನನ್ನ ಕರುಣೆಯ ವಾಗ್ದಾನವಿದೆ. ಇಲ್ಲವಾದರೆ ಅದು ನನ್ನ ಕರುಣೆಯಿಂದ ವಂಚಿತವಾಗಿಯೇ ಇರುವುದು ಮತ್ತು ನನ್ನ ಶಿಕ್ಷೆಯು ಅವರನ್ನು ಆವರಿಸಿಕೊಳ್ಳುವುದು ಎಂಬುದನ್ನು ಈಗಲೇ ಚೆನ್ನಾಗಿ ತಿಳಿದುಕೊಳ್ಳಿರಿ ಎಂದು ಸ್ಪಷ್ಟಪಡಿಸಿದನು. ಮೂಸಾರವರ(ಅ) ಬಳಿಕವೂ ಬನೀ ಇಸ್ರಾಈಲರಿಗೆ ಪದೇಪದೇ ಈ ವಿಷಯದಲ್ಲಿ ಎಚ್ಚರಿಕೆ ನೀಡಲಾಗುತ್ತಿತ್ತು. ಅಲ್ಲಾಹನ ಹೊರತು ಅನ್ಯರ ಆರಾಧನೆ ಮಾಡಬಾರದು ಮತ್ತು ನಮಾಝ್, ಝಕಾತ್‌ಗಳನ್ನು ಪಾಲಿಸಬೇಕೆಂಬ ಬಗ್ಗೆ ಪದೇ ಪದೇ ಅವರಿಂದ ಕರಾರು ಪಡೆದುಕೊಳ್ಳಲಾಗುತ್ತಿತ್ತು. (ಅಲ್‌ಬಖರ: 83) ಕೊನೆಗಂತೂ ಅವರಿಗೆ ಸ್ಪಷ್ಟ ಎಚ್ಚರಿಕೆಯನ್ನೇ ಕುರ್‌ಆನಿನಲ್ಲಿ ನೀಡಲಾಯಿತು:

وَقَالَ اللّٰهُ اِنِّیْ مَعَكُمْ ؕ لَئِنْ اَقَمْتُمُ الصَّلٰوةَ وَ اٰتَیْتُمُ الزَّكٰوةَ وَ اٰمَنْتُمْ بِرُسُلِیْ وَعَزَّرْتُمُوْهُمْ وَ اَقْرَضْتُمُ اللّٰهَ قَرْضًا حَسَنًا لَّاُكَفِّرَنَّ عَنْكُمْ سَیِّاٰتِكُمْ

"ನೀವು ನಮಾಝನ್ನು ಸ್ಥಿರಪಡಿಸಿದರೆ, ಝಕಾತ್ ನೀಡಿದರೆ, ನನ್ನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿ ಕೊಂಡು ಅವರಿಗೆ ಸಹಾಯ ಮಾಡಿದರೆ ಮತ್ತು ಅಲ್ಲಾಹನಿಗೆ ಉತ್ತಮ ಸಾಲವನ್ನು ನೀಡುತ್ತಲಿದ್ದರೆ, ನಿಶ್ಚಯವಾಗಿಯೂ ನಾನು ನಿಮ್ಮ ಕೇಡುಗಳನ್ನೆಲ್ಲ ನಿಮ್ಮಿಂದ ನೀಗಿಸುವೆನು." (ಅಲ್‌ಮಾಇದ: 12)

ಪ್ರವಾದಿ ಮುಹಮ್ಮದ್‌ರವರಿಗಿಂತ(ಸ) ಮುಂಚೆ ಬಂದ ಪ್ರವಾದಿಗಳ ಪೈಕಿ ಕೊನೆಯವರು ಹಝ್ರತ್ ಈಸಾ(ಅ) ಆಗಿದ್ದರು. ಅವರಿಗೂ ಅಲ್ಲಾಹನು ನಮಾಝ್ ಮತ್ತು ಝಕಾತ್‌ಗಳ ಆಜ್ಞೆಯನ್ನು ಒಟ್ಟೊಟ್ಟಾಗಿ ನೀಡಿದ್ದನು. ಈ ಕುರಿತು ಕುರ್‌ಆನಿನಲ್ಲಿ ಹೀಗಿದೆ:

وَّ جَعَلَنِیْ مُبٰرَكًا اَیْنَ مَا كُنْتُ ۪ وَ اَوْصٰنِیْ بِالصَّلٰوةِ وَالزَّكٰوةِ مَا دُمْتُ حَیًّا ﴿۳۱﴾

"ನನ್ನನ್ನು ನಾನೆಲ್ಲಿದ್ದರೂ ಅನುಗ್ರಹೀತನಾಗಿರುವಂತೆ ಮಾಡಿದನು ಮತ್ತು ನನ್ನ ಬಾಳಿನುದ್ದಕ್ಕೂ ನಮಾಝ್ ಮತ್ತು ಝಕಾತ್ ಪಾಲಿಸುತ್ತಿರಲು ಆಜ್ಞೆಯಿತ್ತನು."

(ಮರ್ಯಮ್: 31)

ಇವುಗಳನ್ನೆಲ್ಲಾ ಪರಿಶೀಲಿಸಿದಾಗ ಇಸ್ಲಾಮ್ ಧರ್ಮವು ತನ್ನ ಆರಂಭ ಕಾಲದಿಂದಲೂ, ಪ್ರತಿಯೊಬ್ಬ ಪ್ರವಾದಿಯ ಕಾಲದಲ್ಲೂ ನಮಾಝ್ ಮತ್ತು ಝಕಾತ್ ಎಂಬ ಈ ಎರಡು ಅತಿ ಪ್ರಾಮುಖ್ಯ ಆಧಾರ ಸ್ತಂಭಗಳ ಮೇಲೆ ನಿಂತಿರುತ್ತದೆಂದೂ, ಅಲ್ಲಾಹನ ಮೇಲೆ ವಿಶ್ವಾಸವಿರಿಸಿದ ಯಾವ ಸಮುದಾಯಕ್ಕೂ ಇವೆರಡರಿಂದ ವಿನಾಯಿತಿ ಇರಲಿಲ್ಲವೆಂದೂ ತಿಳಿದು ಬರುತ್ತದೆ.

## ಮುಸ್ಲಿಮ್ ಸಮುದಾಯದ ಮೇಲೆ ಝಕಾತ್ ಕಡ್ಡಾಯ

ಈಗ ಪ್ರವಾದಿ ಮುಹಮ್ಮದ್‌ರವರ(ಸ) ಶರೀಅತ್ ಅಥವಾ ಧರ್ಮಶಾಸ್ತ್ರದಲ್ಲಿ ಈ ಎರಡೂ ವಿಧಿಗಳನ್ನು ಹೇಗೆ ಜೊತೆಜೊತೆಯಾಗಿ ಕಡ್ಡಾಯಗೊಳಿಸಲಾಗಿದೆಯೆಂಬುದನ್ನು ನೋಡಿರಿ. ಪವಿತ್ರ ಕುರ್‌ಆನನ್ನು ತೆರೆದೊಡನೆ ಮೊತ್ತಮೊದಲು ಕಂಡು ಬರುವ ವಾಕ್ಯಗಳನ್ನು ಗಮನಿಸಿರಿ:

ذٰلِكَ الْكِتٰبُ لَا رَیْبَ ۛۚ فِیْهِ ۚ هُدًی لِّلْمُتَّقِیْنَ ﴿۲﴾ الَّذِیْنَ یُؤْمِنُوْنَ بِالْغَیْبِ وَیُقِیْمُوْنَ الصَّلٰوةَ وَمِمَّا رَزَقْنٰهُمْ یُنْفِقُوْنَ ﴿۳﴾

"ಈ ಕುರ್‌ಆನ್ ದೈವಿಕ ಗ್ರಂಥ. ಸಂದೇಹಾತೀತವಿದು. ಮುತ್ತಕೀಗಳಿಗೆ (ಧರ್ಮ ನಿಷ್ಠರಿಗೆ) ಮಾರ್ಗದರ್ಶಿ. ಇವರು ಅಗೋಚರ ವಿಷಯಗಳ ಮೇಲೆ ವಿಶ್ವಾಸವಿರಿಸುವವರೂ ನಮಾಝನ್ನು ಸ್ಥಿರ ಪಡಿಸುವವರೂ ನಾವು ಒದಗಿಸಿದ ಜೀವನಾಧಾರವನ್ನು ದೇವ ಮಾರ್ಗದಲ್ಲಿ ಖರ್ಚು ಮಾಡುವವರೂ ಆಗಿರುತ್ತಾರೆ." (ಅಲ್‌ಬಕರಃ 2, 3)

ಇನ್ನೊಂದು ಕಡೆ ಹೀಗೆ ಹೇಳಲಾಗಿದೆ:

أُولَٰٓئِكَ عَلَىٰ هُدًى مِّن رَّبِّهِمْ ۖ وَأُولَٰٓئِكَ هُمُ الْمُفْلِحُونَ ۝

"ಅಂತಹವರು ನಮ್ಮ ಪ್ರಭುವಿನ ಸನ್ಮಾರ್ಗದಲ್ಲಿದ್ದಾರೆ ಮತ್ತು ಅವರೇ ಯಶಸ್ವಿಯಾಗುವವರು." (ಅಲ್‌ಬಕರಃ 5)

ಅರ್ಥಾತ್- ಸತ್ಯವಿಶ್ವಾಸವಿಲ್ಲದವರೂ ನಮಾಝ್ ಮತ್ತು ಝಕಾತ್‌ಗಳನ್ನು ಪಾಲಿಸದವರೂ ಸನ್ಮಾರ್ಗದಲ್ಲಿಲ್ಲ ಮತ್ತು ಅವರು ವಿಜಯಿಗಳಾಗಲಿಕ್ಕೂ ಸಾಧ್ಯವಿಲ್ಲ.

ಈಗ ನೀವು ಇದೇ ಅಲ್‌ಬಕರಃ ಅಧ್ಯಾಯವನ್ನು ಪಠಿಸುತ್ತಾ ಮುಂದುವರಿಯಿರಿ, ಕೆಲವೇ ಪುಟಗಳ ಬಳಿಕ ಅದರಲ್ಲಿ ಹೀಗೆ ಆದೇಶಿಸಲಾಗಿದೆ:

وَأَقِيمُوا الصَّلَوٰةَ وَآتُوا الزَّكَوٰةَ وَارْكَعُوا مَعَ الرَّاكِعِينَ ۝

"ನಮಾಝನ್ನು ಸಂಸ್ಥಾಪಿಸಿರಿ, ಝಕಾತನ್ನು ಕೊಡಿರಿ ಮತ್ತು ರುಕೂಅ್ ಮಾಡುವವರೊಂದಿಗೆ ರುಕೂಅ್ ಮಾಡಿರಿ." (ಬಾಗುವವರ ಜೊತೆ ನೀವೂ ಬಾಗಿರಿ ಅರ್ಥಾತ್ ಸಾಮೂಹಿಕವಾಗಿ ನಮಾಝ್ ಮಾಡಿರಿ) (ಸೂಕ್ತ: 43)

ಇನ್ನೂ ಮುಂದುವರಿದಾಗ ಅದೇ ಅಧ್ಯಾಯದಲ್ಲಿ ನಿಮಗೆ ಈ ವಚನ ಸಿಗುವುದು:

لَيْسَ الْبِرَّ أَن تُوَلُّوا وُجُوهَكُمْ قِبَلَ الْمَشْرِقِ وَالْمَغْرِبِ وَلَٰكِنَّ الْبِرَّ مَنْ آمَنَ
بِاللَّهِ وَالْيَوْمِ الْآخِرِ وَالْمَلَائِكَةِ وَالْكِتَابِ وَالنَّبِيِّينَ وَآتَى الْمَالَ عَلَىٰ حُبِّهِ ذَوِي الْقُرْبَىٰ
وَالْيَتَامَىٰ وَالْمَسَاكِينَ وَابْنَ السَّبِيلِ وَالسَّائِلِينَ وَفِي الرِّقَابِ وَأَقَامَ الصَّلَوٰةَ
وَآتَى الزَّكَوٰةَ وَالْمُوفُونَ بِعَهْدِهِمْ إِذَا عَاهَدُوا ۖ وَالصَّابِرِينَ فِي الْبَأْسَاءِ وَالضَّرَّاءِ
وَحِينَ الْبَأْسِ ۗ أُولَٰٓئِكَ الَّذِينَ صَدَقُوا ۖ وَأُولَٰٓئِكَ هُمُ الْمُتَّقُونَ ۝١٧٧

"ನೀವು ನಿಮ್ಮ ಮುಖಗಳನ್ನು ಪೂರ್ವದಿಕ್ಕಿಗೆ ಅಥವಾ ಪಶ್ಚಿಮ ದಿಕ್ಕಿಗೆ ಮಾಡಿಕೊಳ್ಳುವುದು ಧರ್ಮಶೀಲತೆಯಲ್ಲ. ನಿಜವಾಗಿ ಒಬ್ಬನು ಅಲ್ಲಾಹನನ್ನೂ ನಿರ್ಣಾಯಕ

ದಿನವನ್ನೂ ದೇವಚರರನ್ನೂ ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ ಅವನ ಸಂದೇಶ ವಾಹಕರನ್ನೂ ಹೃತ್ಪೂರ್ವಕ ಒಪ್ಪಿಕೊಳ್ಳುವುದೂ ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನವೆಚ್ಚುಗೆಯ ಸಂಪತ್ತನ್ನು ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸಹಾಯಾರ್ಥಿಗಳಿಗೂ ದಾಸ್ಯವಿಮೋಚನೆಗಾಗಿಯೂ ವ್ಯಯಿಸುವುದೂ ನಮಾಝನ್ನು ಸಂಸ್ಥಾಪಿಸುವುದೂ ಝಕಾತನ್ನು (ಕಡ್ಡಾಯ ದಾನವನ್ನು) ನೀಡುವುದೂ ವಾಗ್ದಾನ ಮಾಡಿದರೆ ಪೂರೈಸುವುದೂ ಕಷ್ಟ, ಕಾರ್ಪಣ್ಯಗಳಲ್ಲಿಯೂ ಸತ್ಯಾಸತ್ಯಗಳ ಸಮರವಾಗುತ್ತಿರುವಾಗಲೂ ಸಹನೆಯಿಂದಿರುವುದೂ ಧರ್ಮಶೀಲತೆಯಾಗಿರುತ್ತದೆ. ಇವರೇ ಸತ್ಯಸಂಧರು ಮತ್ತು ಇವರೇ ಧರ್ಮನಿಷ್ಠರು." (ಸೂಕ್ತ: 177)

ಮತ್ತೂ ಮುಂದುವರಿದು ನೋಡಿರಿ ಸೂರಃ ಅಲ್‌ಮಾಇದಃದಲ್ಲಿ ಹೀಗಿದೆ:

إِنَّمَا وَلِيُّكُمُ اللَّهُ وَرَسُولُهُ وَالَّذِينَ آمَنُوا الَّذِينَ يُقِيمُونَ الصَّلَاةَ
وَيُؤْتُونَ الزَّكَاةَ وَهُمْ رَاكِعُونَ ۝ وَمَنْ يَتَوَلَّ اللَّهَ وَرَسُولَهُ وَالَّذِينَ
آمَنُوا فَإِنَّ حِزْبَ اللَّهِ هُمُ الْغَالِبُونَ ۝

"ನಿಮ್ಮ ಆಪ್ತ ಮಿತ್ರರು ವಾಸ್ತವದಲ್ಲಿ ಅಲ್ಲಾಹ್, ಅಲ್ಲಾಹನ ಸಂದೇಶವಾಹಕರು ಮತ್ತು ನಮಾಝನ್ನು ಸಂಸ್ಥಾಪಿಸುವ, ಝಕಾತ್ ಕೊಡುವ ಹಾಗೂ ಅಲ್ಲಾಹನ ಮುಂದೆ ಬಾಗುವ ಸತ್ಯವಿಶ್ವಾಸಿಗಳು ಮಾತ್ರ. ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನು ಮತ್ತು ಸತ್ಯವಿಶ್ವಾಸಿ ಗಳನ್ನು ತನ್ನ ಆಪ್ತ ಮಿತ್ರರನ್ನಾಗಿ ಮಾಡಿಕೊಂಡವನು - ಅಲ್ಲಾಹನ ಪಕ್ಷವೇ ವಿಜಯ ಹೊಂದುವ ಪಕ್ಷವೆಂದು ಅರಿತಿರಬೇಕು." (ಸೂಕ್ತ: 55, 56)

## ನಮಾಝ್ ಮತ್ತು ಝಕಾತ್: ಸತ್ಯವಿಶ್ವಾಸಿಗಳ ಲಕ್ಷಣ

ಈ ಪ್ರಮುಖ ಪವಿತ್ರ ವಚನದಲ್ಲಿ ಒಂದು ದೊಡ್ಡ ನಿಯಮವನ್ನು ವಿವರಿಸಲಾಗಿದೆ. ಮೊದಲನೆಯದಾಗಿ ನಮಾಝ್ ಮಾಡುವವರು ಮತ್ತು ಝಕಾತ್ ಕೊಡುವವರು ಮಾತ್ರ ಸತ್ಯವಿಶ್ವಾಸಿಗಳೆಂದು ಈ ಸೂಕ್ತದಿಂದ ತಿಳಿಯಿತು. ಇಸ್ಲಾಮಿನ ಈ ಎರಡು ಆಧಾರಸ್ತಂಭಗಳನ್ನು ನಿರ್ಲಕ್ಷಿಸುವವನು ತಾನು ಸತ್ಯವಿಶ್ವಾಸಿ ಎಂದು ಹೇಳಿದರೆ ಅದು ಸುಳ್ಳು. ಎರಡನೆಯದಾಗಿ ಅಲ್ಲಾಹ್, ಅವನ ಸಂದೇಶವಾಹಕ ಮತ್ತು ಸತ್ಯವಿಶ್ವಾಸಿಗಳ ಪ್ರತ್ಯೇಕವಾದ ಒಂದು ಪಕ್ಷವಿದೆ. ಎಲ್ಲಾ ಪಕ್ಷ ಪಂಗಡಗಳನ್ನು ತೊರೆದು ಈ ಪಕ್ಷಕ್ಕೆ ಸೇರಬೇಕಾದುದು ಸತ್ಯವಿಶ್ವಾಸಿಯ ಕರ್ತವ್ಯ. ತಂದೆ, ಸಹೋದರ, ಮಗ, ನೆರೆಯವ, ದೇಶಬಾಂಧವ ಅಥವಾ ಇನ್ನಾರೇ ಆಗಿರಲಿ ಅವರು ಈ ಪಕ್ಷದಿಂದ ಹೊರಗಿರುವವರಾಗಿದ್ದರೆ ಅವರನ್ನು ಅತಿಯಾಗಿ ಪ್ರೀತಿಸುವ ಮತ್ತು ಅವರನ್ನು ಬೆಂಬಲಿಸುವ ಮುಸ್ಲಿಮನು, ತನ್ನಂತಹವನಿಗೆ ಅಲ್ಲಾಹನ ಮೆಚ್ಚುಗೆ, ಪ್ರೀತಿ ಮತ್ತು ಬೆಂಬಲ ಸಿಗುವುದೆಂದು ನಿರೀಕ್ಷಿಸಬಾರದು ಎಂದು ಇದರಿಂದ ವ್ಯಕ್ತವಾಯಿತು. ಕೊನೆಯದಾಗಿ, ಸತ್ಯ

ವಿಶ್ವಾಸಿಗಳು ಏಕಾಗ್ರಚಿತ್ತದಿಂದ ಅಲ್ಲಾಹನನ್ನು, ಸಂದೇಶವಾಹಕರನ್ನು ಮತ್ತು ಸತ್ಯವಿಶ್ವಾಸಿಗಳನ್ನು ಮಾತ್ರ ತಮ್ಮ ಸಂರಕ್ಷಕ, ಸ್ನೇಹಿತ ಮತ್ತು ಸಂಗಾತಿಗಳನ್ನಾಗಿ ಮಾಡಿಕೊಂಡಾಗ ಅವರಿಗೆ ಔನ್ನತ್ಯ ಹಾಗೂ ವಿಜಯ ದೊರಕುವುದು ಎಂಬುದನ್ನು ಈ ವಾಕ್ಯದಿಂದ ತಿಳಿದಂತಾಯಿತು.

## ಇಸ್ಲಾಮೀ ಭ್ರಾತೃತ್ವದ ಬುನಾದಿಗಳು

ಸೂರಃ ಅತ್ತೌಬಃದಲ್ಲಿ ಅಲ್ಲಾಹನು ಮುಸ್ಲಿಮರಿಗೆ ಸತ್ಯನಿಷೇಧಿಗಳ ಮತ್ತು ಬಹುದೇವ ವಿಶ್ವಾಸಿಗಳ ವಿರುದ್ಧ ಹೋರಾಡುವ ಆಜ್ಞೆ ನೀಡಿರುವನು. ಅಲ್ಲಿ ಅನೇಕ ರುಕೂಅ್‌ಗಳಲ್ಲಿ ನಿರಂತರವಾಗಿ ಯುದ್ಧದ ಕುರಿತಾಗಿಯೇ ಆಜ್ಞೆಗಳನ್ನು ನೀಡಲಾಗಿದೆ. ಇದೇ ಸರಣಿಯಲ್ಲಿ ಈ ರೀತಿ ಹೇಳಲಾಗಿದೆ:

فَإِنْ تَابُوا وَأَقَامُوا الصَّلٰوةَ وَاٰتَوُا الزَّكٰوةَ فَإِخْوَانُكُمْ فِي الدِّيْنِ ۗ
وَنُفَصِّلُ الْاٰيٰتِ لِقَوْمٍ يَّعْلَمُوْنَ ⑪

"ಆದರೂ ಇವರು ಪಶ್ಚಾತ್ತಾಪ ಪಟ್ಟರೆ ಮತ್ತು ನಮಾಝನ್ನು ಸಂಸ್ಥಾಪಿಸಿ ಝಕಾತ್ ಕೊಟ್ಟರೆ, ನಿಮ್ಮ ಧರ್ಮಬಾಂಧವರಾಗಿರುತ್ತಾರೆ. ತಿಳುವಳಿಕೆಯುಳ್ಳವರಿಗೆ ನಾವು ನಮ್ಮ ಆದೇಶಗಳನ್ನು ವಿವರಿಸುತ್ತೇವೆ." (ಅತ್ತೌಬಃ: 11)

ಅರ್ಥಾತ್ - ಅವರು ಕೇವಲ ಕುಫ್ರ್ ಮತ್ತು ಶಿರ್ಕ್‌ಗಳಿಂದ ಪಶ್ಚಾತ್ತಾಪಪಟ್ಟು ಸತ್ಯ ವಿಶ್ವಾಸಿಗಳಾದರೆ ಮಾತ್ರ ಸಾಲದು, ಈ ಪಶ್ಚಾತ್ತಾಪ ಮತ್ತು ಸತ್ಯವಿಶ್ವಾಸ ಸ್ವೀಕಾರಗಳು ಅವರು ನಮಾಝನ್ನು ಸಂಸ್ಥಾಪಿಸಿದಾಗ ಮತ್ತು ಝಕಾತ್ ಕೊಟ್ಟಾಗ ಮಾತ್ರ ಸತ್ಯವೆಂದು ಸಾಬೀತಾಗುತ್ತವೆ. ಅವರು ತಮ್ಮ ಈ ಕ್ರಿಯೆಗಳಿಂದ ಅದನ್ನು ಸಾಬೀತುಪಡಿಸಿದರೆ ಆಗ ಅವರು ನಿಮ್ಮ ಧಾರ್ಮಿಕ ಬಂಧುಗಳು, ಇಲ್ಲವಾದರೆ ಅವರನ್ನು ನಿಮ್ಮ ಧರ್ಮ ಬಾಂಧವರೆಂದು ತಿಳಿಯಬೇಡಿರಿ ಮತ್ತು ಅವರ ವಿರುದ್ಧ ಹೋರಾಟವನ್ನು ನಿಲ್ಲಿಸಬೇಡಿರಿ.

ಇದೇ ಅಧ್ಯಾಯದಲ್ಲಿ ಇನ್ನೊಂದು ಕಡೆ ಹೀಗೆನ್ನಲಾಗಿದೆ:

وَالْمُؤْمِنُوْنَ وَالْمُؤْمِنٰتُ بَعْضُهُمْ أَوْلِيَآءُ بَعْضٍ ۘ يَأْمُرُوْنَ بِالْمَعْرُوْفِ
وَيَنْهَوْنَ عَنِ الْمُنْكَرِ وَيُقِيْمُوْنَ الصَّلٰوةَ وَيُؤْتُوْنَ الزَّكٰوةَ وَيُطِيْعُوْنَ اللّٰهَ وَرَسُوْلَهٗ ۚ أُولٰٓئِكَ
سَيَرْحَمُهُمُ اللّٰهُ ۗ إِنَّ اللّٰهَ عَزِيْزٌ حَكِيْمٌ ⑦١

"ಸತ್ಯವಿಶ್ವಾಸಿ ಪುರುಷರು ಮತ್ತು ಸತ್ಯವಿಶ್ವಾಸಿ ಸ್ತ್ರೀಯರು ಇವರೆಲ್ಲ ಪರಸ್ಪರ ಆಪ್ತರು; ಅವರು ಒಳಿತುಗಳ ಅಪ್ಪಣೆ ಕೊಡುತ್ತಾರೆ ಮತ್ತು ಕೆಡುಕುಗಳಿಂದ ತಡೆಯುತ್ತಾರೆ. ನಮಾಝ್ ಸಂಸ್ಥಾಪಿಸುತ್ತಾರೆ, ಝಕಾತ್ ಕೊಡುತ್ತಾರೆ ಮತ್ತು ಅಲ್ಲಾಹ್ ಹಾಗೂ ಅವನ

ರಸೂಲರ ಅನುಸರಣೆ ಮಾಡುತ್ತಾರೆ. ಇವರ ಮೇಲೆ ಅಲ್ಲಾಹನ ಕರುಣೆ ಅವತೀರ್ಣಗೊಂಡೇ ತೀರುವುದು. ನಿಶ್ಚಯವಾಗಿಯೂ ಅಲ್ಲಾಹ್ ಮಹಾ ಪ್ರತಾಪಿಯೂ ಯುಕ್ತಿ ಪೂರ್ಣನೂ ಆಗಿರುತ್ತಾನೆ."

(ಅತ್ತೌಬಃ: 71)

ಕೇಳಿದಿರಾ? ಸತ್ಯವಿಶ್ವಾಸದ ಘೋಷಣೆ ಮಾಡಿಕೊಂಡ ಬಳಿಕ ಕಾರ್ಯತಃ ನಮಾಝ್ ಮತ್ತು ಝಕಾತ್‌ಗಳ ಪಾಲನೆ ಮಾಡದಾತನು ಮುಸ್ಲಿಮರ ಬಂಧುವಾಗಲು ಸಾಧ್ಯವೇ ಇಲ್ಲ. ಈಮಾನ್, ನಮಾಝ್, ಝಕಾತ್ ಇವು ಮೂರು ಸೇರಿ ಸತ್ಯವಿಶ್ವಾಸಿಗಳ ಪಕ್ಷ ರಚನೆ ಯಾಗುತ್ತದೆ. ಇವು ಮೂರನ್ನು ಪಾಲಿಸುವವರು ಮಾತ್ರ ಈ ದಿವ್ಯ ಪಕ್ಷದೊಳಗಿರುವರು. ಪ್ರೇಮ, ಸೌಹಾರ್ದ, ಸಹಕಾರಗಳ ಗಾಢ ಸಂಬಂಧವು ಅವರೊಳಗೆ ಸ್ಥಿರವಾಗಿರುವುದು. ಈ ಮೂರನ್ನು ಪಾಲಿಸದೆ ಕೇವಲ ನಾಮ ಮಾತ್ರಕ್ಕೆ ಮುಸ್ಲಿಮರೆನಿಸಿಕೊಂಡವರೂ ಆ ಪಕ್ಷದಿಂದ ಹೊರಗೆ ಉಳಿಯುವರು. ಅಂಥವರೊಂದಿಗೆ ಪ್ರೇಮ, ಸೌಹಾರ್ದ, ಸಹಕಾರಗಳ ಸಂಬಂಧಗಳ ನ್ನಿರಿಸುವುದೆಂದರೆ ನೀವು ಅಲ್ಲಾಹನ ಕಾನೂನುಗಳನ್ನು ಮುರಿದು ಅಲ್ಲಾಹನ ಪಕ್ಷವನ್ನು ಛಿದ್ರಗೊಳಿಸಿದಂತೆಯೇ ಸರಿ. ಅನಂತರ ನೀವು ಲೋಕದಲ್ಲಿ ಔನ್ನತ್ಯದಿಂದಿರಬೇಕೆಂದು ನಿರೀಕ್ಷಿಸುವುದು ಹೇಗೆ?

## ಅಲ್ಲಾಹನ ನೆರವಿಗಿರುವ ಶರತ್ತುಗಳು

ಸೂರಃ ಅಲ್‌ಹಜ್ಜ್‌ನಲ್ಲಿ ಹೀಗೆ ಹೇಳಲಾಗಿದೆ:

وَلَيَنْصُرَنَّ اللّٰهُ مَنْ يَّنْصُرُهٗ ؕ اِنَّ اللّٰهَ لَقَوِىٌّ عَزِيْزٌ ۞ اَلَّذِيْنَ
اِنْ مَّكَّنّٰهُمْ فِى الْاَرْضِ اَقَامُوا الصَّلٰوةَ وَ اٰتَوُا الزَّكٰوةَ وَاَمَرُوْا
بِالْمَعْرُوْفِ وَنَهَوْا عَنِ الْمُنْكَرِ ؕ وَلِلّٰهِ عَاقِبَةُ الْاُمُوْرِ ۞

"ಯಾರು ಅಲ್ಲಾಹನಿಗೆ ಸಹಾಯ ಮಾಡುವರೋ ಅವರಿಗೆ ಅವನು ಖಂಡಿತ ಸಹಾಯ ಮಾಡುವನು. ಅಲ್ಲಾಹನು ಮಹಾ ಶಕ್ತಿವಂತನೂ ಪ್ರಬಲನೂ ಆಗಿರುತ್ತಾನೆ. (ಇವರು ಎಂಥವರೆಂದರೆ) ನಾವು ಇವರಿಗೆ ಭೂಮಿಯಲ್ಲಿ ಅಧಿಕಾರ ಪ್ರದಾನ ಮಾಡಿದರೆ ಇವರು ನಮಾಝ್ ಸಂಸ್ಥಾಪಿಸುವರು, ಝಕಾತ್ ಕೊಡುವರು, ಒಳಿತಿನ ಆಜ್ಞೆ ಕೊಡುವರು ಮತ್ತು ಕೆಡುಕಿನಿಂದ ತಡೆಯುವರು ಮತ್ತು ಸಕಲ ವ್ಯವಹಾರಗಳ ಅಂತಿಮ ಪರಿಣಾಮವು ಅಲ್ಲಾಹನ ಕೈಯಲ್ಲಿದೆ."

(ಸೂಕ್ತ: 40, 41)

ಈ ಸೂಕ್ತದಲ್ಲಿ ಹಿಂದೆ ಬನೀ ಇಸ್ರಾಈಲರಿಗೆ ನೀಡಲಾಗಿದ್ದ ಸೂಚನೆಯನ್ನೇ ಮುಸ್ಲಿಮರಿಗೂ ನೀಡಲಾಗಿದೆ. ಅಲ್ಲಾಹನು ಬನೀ ಇಸ್ರಾಈಲರಿಗೆ ಎಂತಹ ಎಚ್ಚರಿಕೆ ಕೊಟ್ಟಿದ್ದ ನೆಂಬುದನ್ನು ಈಗ ತಾನೇ ನಿಮಗೆ ತಿಳಿಸಿದ್ದೇನೆ. ನೀವು ನಮಾಝ್ ಸಂಸ್ಥಾಪಿಸುವ, ಝಕಾತ್ ಕೊಡುವ ಮತ್ತು ನಮ್ಮ ಸಂದೇಶವಾಹಕರ ಸತ್ಯ ಪ್ರಚಾರ ಕಾರ್ಯದಲ್ಲಿ ಅವರಿಗೆ ಸಹಕಾರ ನೀಡುತ್ತಿರುವ ವರೆಗೂ ಅರ್ಥಾತ್- ನೀವು ನನ್ನ ಶಾಸನವನ್ನು ಈ ಲೋಕದಲ್ಲಿ ಜಾರಿಗೊಳಿಸಲಿ ಕ್ಕಾಗಿ ಶ್ರಮಿಸುತ್ತಿರುವ ವರೆಗೂ ನಾನು ನಿಮ್ಮೊಂದಿಗಿರುವೆನು. ಆದರೆ ನೀವು ಈ ಕರ್ತವ್ಯವನ್ನು ಕೈಬಿಟ್ಟೊಡನೆ ನಾನು ನಿಮಗೆ ನೀಡುತ್ತಿರುವ ಸಹಾಯ ಹಸ್ತವನ್ನು ಹಿಂದಕ್ಕೆಳೆದುಕೊಳ್ಳುವೆನು ಎಂದು ಅವರೊಡನೆ ಸ್ಪಷ್ಟವಾಗಿ ಹೇಳಲಾಗಿದೆ. ಈಗ ಈ ಮಾತನ್ನೇ ಮುಸ್ಲಿಮರೊಡನೆಯೂ ಹೇಳಲಾಗಿದೆ. ನೀವು ಇಹಲೋಕದಲ್ಲಿ ಪ್ರಾಬಲ್ಯವನ್ನು ಹೊಂದಿ ನಮಾಝನ್ನು ಸಂಸ್ಥಾಪಿಸಿದರೆ, ಝಕಾತ್ ಕೊಟ್ಟರೆ, ಸದಾಚಾರಗಳ ಪ್ರಸಾರಗೈದರೆ ಮತ್ತು ದುರಾಚಾರಗಳ ಉಚ್ಚಾಟನೆಗಾಗಿ ಶ್ರಮಿಸಿದರೆ ನಾನು ನಿಮ್ಮ ಸಹಾಯಕನಾಗುವೆನು. ನನ್ನ ಸಹಾಯ ಪಡೆಯುವಾತನನ್ನು ಸೋಲಿಸು ವವರು ಯಾರಿದ್ದಾರೆ? ಆದರೆ ನೀವು ಝಕಾತನ್ನು ನಿರಾಕರಿಸಿದರೆ ಭೂಮಿಯಲ್ಲಿ ಪ್ರಾಬಲ್ಯವನ್ನು ಪಡೆದು ಸದಾಚಾರಗಳ ಬದಲಿಗೆ ದುರಾಚಾರಗಳನ್ನು ಹರಡಲು ಹಾಗೂ ದುರಾಚಾರಗಳ ಬದಲು ಸದಾಚಾರಗಳನ್ನು ನಾಶಗೊಳಿಸಲು ಹೊರಟರೆ, ನನ್ನ ಕೀರ್ತಿ ಧ್ವಜವನ್ನೇರಿಸುವ ಬದಲಿಗೆ ನಿಮ್ಮ ಕೀರ್ತಿಗಾಗಿ ಶ್ರಮಿಸಿದರೆ ಮತ್ತು ವಿವಿಧ ತೆರಿಗೆಗಳನ್ನು ವಸೂಲು ಮಾಡಿ ಈ ಭೂಮಿಯಲ್ಲಿ ನಿಮಗಾಗಿ ಸ್ವರ್ಗ ನಿರ್ಮಾಣ ಮಾಡಿಕೊಳ್ಳುವುದೇ ಭೂಮಿಯ ಆಧಿಪತ್ಯದ ಉದ್ದೇಶವೆಂದು ತಿಳಿದುಕೊಂಡರೆ ನಿಮಗೆ ನನ್ನ ಸಹಾಯ ಖಂಡಿತ ಸಿಗಲಾರದು. ಅನಂತರ ಶೈತಾನ್ ಮಾತ್ರ ನಿಮ್ಮ ಸಹಾಯಕನಾಗಲು ಉಳಿದಿರುವನು ಎಂದು ಅವರನ್ನು ಎಚ್ಚರಿಸಲಾಗಿದೆ.

## ಮುಸ್ಲಿಮರಿಗೆ ಎಚ್ಚರಿಕೆ

ಅಲ್ಲಾಹು ಅಕ್ಬರ್! ಎಂತಹ ಪಾಠದಾಯಕ ಸನ್ನಿವೇಶವಿದು! ಬನೀ ಇಸ್ರಾಈಲರು ತಮಗೆ ನೀಡಲಾದ ಎಚ್ಚರಿಕೆಯನ್ನು ಕೇವಲ ಪೊಳ್ಳು ಬೆದರಿಕೆ ಎಂದು ತಿಳಿದುಕೊಂಡು ಅದಕ್ಕೆ ವಿರುದ್ಧವಾಗಿ ಕಾರ್ಯವೆಸಗಿ ತಮ್ಮ ಪರಿಣಾಮವನ್ನು ಕಂಡುಕೊಂಡರು. (ಸದ್ಯ ಅವರಿಗೆ ಒಂದು ಪರಿಮಿತ ಪ್ರಮಾಣದ ರಾಷ್ಟ್ರಾಧಿಕಾರವೇನೋ ದೊರಕಿದೆಯಾದರೂ ಅದು ಕೇವಲ ಅಮೇರಿಕಾ ಮತ್ತು ಬ್ರಿಟಿಷರ ರಾಜಕೀಯ ಕುತಂತ್ರದ ಆಧಾರದಲ್ಲಿ ಒಂದು ರಾಷ್ಟ್ರವನ್ನು ಪಡೆದ ಜನಾಂಗ ವೆಂಬಂತೆ ತೋರುತ್ತದೆ. ಯಥಾರ್ಥದಲ್ಲಿ ಅದಕ್ಕೆ ಸ್ವಂತ ಅಸ್ತಿತ್ವವೇನೂ ಇಲ್ಲ.) ಈ ಯಹೂದಿಯರು ಎಷ್ಟೋ ಕಾಲದಿಂದ ಭೂಮಿಯ ನಾನಾ ಭಾಗಗಳಲ್ಲಿ ಅಲೆದಾಡಿ ಕೊಂಡಿದ್ದರು. ಹೋದ ಹೋದಲ್ಲಿಂದೆಲ್ಲಾ ಅಟ್ಟಲ್ಪಡುತ್ತಿದ್ದರು. ಎಲ್ಲೂ ಅವರಿಗೆ ನೆಲೆಯಿರಲಿಲ್ಲ. ಕೋಟಿ ಗಟ್ಟಲೆ ರೂಪಾಯಿ ಮೌಲ್ಯದ ನಿಧಿಗಳು ಅವರಲ್ಲಿದ್ದುವು. ಅದು ಜಗತ್ತಿನಲ್ಲಿ ಅತ್ಯಂತ ಶ್ರೀಮಂತ ಜನಾಂಗವಾಗಿತ್ತು. ಆದರೆ ಈ ಅಪಾರ ಸಂಪತ್ತು ಅವರಿಗೆ

ಯಾವ ಉಪಯೋಗಕ್ಕೂ ಬರಲಿಲ್ಲ. ಅವರು ನಮಾಝಿನ ಬದಲಿಗೆ ಅನಾಚಾರ ಮತ್ತು ಝಕಾತ್‌ನ ಬದಲಿಗೆ ಶಾಪಗ್ರಸ್ತ ಬಡ್ಡಿಕೋರತನವನ್ನು ಕೈಗೊಂಡರು. ಈ ಮೂಲಕ ಅವರು ಈ ಶಾಪವನ್ನು ಸ್ವತಃ ತಮ್ಮ ಮೇಲೆ ಎರಗಿಸಿಕೊಂಡುದು ಮಾತ್ರವಲ್ಲ, ಅದನ್ನೆತ್ತಿಕೊಂಡು ಪ್ಲೇಗ್ ರೋಗಾಣುಗಳನ್ನು ಹೊಂದಿದ ಇಲಿಗಳಂತೆ ಜಗತ್ತಿನಾದ್ಯಂತ ಹಬ್ಬಿಸಿದರು. ಈಗಲೂ ಹಬ್ಬಿಸುತ್ತಿದ್ದಾರೆ. ಅನಂತರ ಇದೇ ಎಚ್ಚರಿಕೆಯನ್ನು ಮುಸ್ಲಿಮರಿಗೂ ನೀಡಲಾಯಿತು. ಆದರೆ ಅವರೂ ಅದರ ಬಗ್ಗೆ ಕಾಳಜಿ ವಹಿಸದೆ ನಮಾಝ್ ಮತ್ತು ಝಕಾತನ್ನು ನಿರ್ಲಕ್ಷಿಸಿದರು. ಅವರು ತಮ್ಮ ದೇವದತ್ತವಾದ ಶಕ್ತಿ ಸಾಮರ್ಥ್ಯಗಳನ್ನು ಒಳಿತುಗಳ ಪ್ರಚಾರಕ್ಕಾಗಿಯೂ ಕೆಡುಕುಗಳ ಉಚ್ಚಾಟನೆಗಾಗಿಯೂ ವಿನಿಯೋಗಿಸುವುದನ್ನು ಬಿಟ್ಟುಬಿಟ್ಟರು. ಇದರ ಪರಿಣಾಮವನ್ನು ನೋಡಿರಿ. ಅವರಿಂದು ಅಧಿಕಾರ ಸ್ಥಾನದಿಂದ ತಳ್ಳಲ್ಪಟ್ಟಿದ್ದಾರೆ. ಇಡೀ ಜಗತ್ತಿನಲ್ಲಿ ಅವರು ಅಕ್ರಮಿಗಳ ಅಕ್ರಮಕ್ಕೆ ತುತ್ತಾಗಿದ್ದಾರೆ. ಜಗತ್ತಿನಲ್ಲಿ ಅತ್ಯಂತ ದುರ್ಬಲರೂ ಪರಾಜಿತರೂ ಆಗಿದ್ದಾರೆ. ಈ ರೀತಿ ಅವರು ನಮಾಝ್ ಮತ್ತು ಝಕಾತನ್ನು ತ್ಯಜಿಸಿದ ದುಷ್ಪರಿಣಾಮವನ್ನಂತೂ ಕಂಡುಕೊಂಡಂತಾಯಿತು. ಇದೀಗ ಮುಸ್ಲಿಮರನ್ನು ನಿರ್ಲಜ್ಜೆ, ಅಶ್ಲೀಲ ಮತ್ತು ದುರಾಚಾರಗಳ ಕೂಪದಲ್ಲಿ ತಳ್ಳಲು ಬಯಸುವ ಒಂದು ಪಂಗಡವು ಅವರೊಳಗಿಂದಲೇ ಉದಯಿಸಿ, "ನಿಮ್ಮ ದಾರಿದ್ರ್ಯವನ್ನು ತೊಲಗಿಸಲಿಕ್ಕಾಗಿ ಬ್ಯಾಂಕುಗಳನ್ನೂ ವಿಮಾ ಕಂಪೆನಿಗಳನ್ನೂ ಸ್ಥಾಪಿಸಿರಿ. ಬಡ್ಡಿ ವ್ಯವಹಾರವನ್ನು ಆರಂಭಿಸಿರಿ" ಎಂದು ಬೋಧಿಸುತ್ತಿದೆ. ಅವರು ಇದನ್ನನುಸರಿಸಿದರೆ ದೇವನಾಣೆಗೂ ಯಹೂದಿಯರ ಮೇಲೆರಗಿದ ದುಃಖ ದುಮ್ಮಾನಗಳು ಇವರ ಮೇಲೂ ಎರಗದಿರಲಾರದು. ಬನೀ ಇಸ್ರಾಈಲರು ಬಲಿಯಾದ ಅಲ್ಲಾಹನ ಶಾಪಕ್ಕೆ ಇವರೂ ಒಳಗಾಗುವರು.

## ಝಕಾತ್ ಕೊಡದೆ ಇರುವವರ ದುರ್ಗತಿ

ಸಹೋದರರೇ, ಝಕಾತ್ ಎಂದರೇನು? ಅಲ್ಲಾಹನು ಅದರಲ್ಲಿ ಎಂತಹ ಅದ್ಭುತ ಶಕ್ತಿಯನ್ನು ತುಂಬಿದ್ದಾನೆ? ಇಂದಿನ ಮುಸ್ಲಿಮರು ತೀರಾ ಕ್ಷುಲ್ಲಕವೆಂಬಂತೆ ಕಾಣುವ ಅಲ್ಲಾಹನ ಈ ಅನುಗ್ರಹವು ಯಥಾರ್ಥದಲ್ಲಿ ತನ್ನೊಳಗೆ ಅದೆಂತಹ ಮಹಾ ಸಮೃದ್ಧಿಯನ್ನು ಹೊಂದಿದೆ ಎಂಬುದನ್ನು ಮುಂದಿನ ಉಪನ್ಯಾಸದಲ್ಲಿ ವಿವರಿಸಲಿರುವೆನು. ಇಂದಿನ ಉಪನ್ಯಾಸದಲ್ಲಿ ನಮಾಝ್ ಮತ್ತು ಝಕಾತ್‌ಗಳು ಇಸ್ಲಾಮಿನಲ್ಲಿ ಯಾವ ಸ್ಥಾನ ಪಡೆದಿವೆಯೆಂಬುದನ್ನು ತಿಳಿಸುವುದು ನನ್ನ ಉದ್ದೇಶವಾಗಿತ್ತು. ನಮಾಝ್ ಮಾಡದಿದ್ದರೂ ಝಕಾತ್ ಕೊಡದೆ ಇದ್ದರೂ ತಾವು ಮುಸ್ಲಿಮರಾಗಿಯೇ ಉಳಿದಿರುತ್ತೇವೆಂದು ಅನೇಕರು ತಿಳಿಯುತ್ತಾರೆ. ಆದರೆ ಕುರ್‌ಆನ್ ಇದನ್ನು ಸ್ಪಷ್ಟವಾಗಿ ನಿರಾಕರಿಸುತ್ತದೆ. ಮನುಷ್ಯನು ಕಲಿಮಾದ ಮೂಲಕ ಮಾಡಿದ ಘೋಷಣೆ ಸತ್ಯವೆಂದು ಸಾಬೀತು ಪಡಿಸಲಿಕ್ಕಾಗಿ ನಮಾಝ್ ಮತ್ತು ಝಕಾತ್‌ಗಳನ್ನು ಪಾಲಿಸದೆ ಹೋದರೆ ಆ ಕಲಿಮಾದ ಪಠಣವೇ ಅರ್ಥಹೀನವಾಗಿ ಬಿಡುತ್ತದೆ. ಆದುದರಿಂದಲೇ ಹಝ್ರತ್

ಅಬೂಬಕರ್‌ರವರು(ರ) ಝಕಾತ್ ಕೊಡಲು ನಿರಾಕರಿಸುವವರನ್ನು ಕಾಫಿರ್ (ಸತ್ಯನಿಷೇಧಿ) ಎಂದು ತಿಳಿದು, ನಾನು ಈಗಾಗಲೇ ವಿವರಿಸಿರುವಂತೆ ಅವರ ವಿರುದ್ಧ ಯುದ್ಧ ಸಾರಿದ್ದರು. ಅಲ್ಲಾಹ್ ಮತ್ತು ಸಂದೇಶವಾಹಕರ ಮೇಲೆ ವಿಶ್ವಾಸವನ್ನಿರಿಸಿ, ನಮಾಝ್ ಮಾಡುತ್ತಿರುವವರ ವಿರುದ್ಧ ಯುದ್ಧ ಸಾರುವುದು ಸಮಂಜಸವೇ ಎಂಬ ಬಗ್ಗೆ ಆರಂಭದಲ್ಲಿ ಮಾನ್ಯ ಸಹಾಬಿಗಳಿಗೆ ಸಂದೇಹವಿತ್ತು. ಆದರೆ ಪ್ರವಾದಿಯವರ(ಸ) ನಿಕಟವರ್ತಿಯಾಗಿದ್ದ ಹಝ್ರತ್ ಅಬೂಬಕರ್ ರವರು(ರ) ತಮ್ಮ ಅಭಿಪ್ರಾಯದಲ್ಲಿ ಅಚಲರಾಗಿ ನಿಂತು ಅವರು ಪ್ರವಾದಿಯವರ(ಸ) ಕಾಲದಲ್ಲಿ ಸಲ್ಲಿಸುತ್ತಿದ್ದ ಝಕಾತಿನಿಂದ, ಒಂಟೆಯನ್ನು ಕಟ್ಟುವ ಒಂದು ತುಂಡು ಹಗ್ಗವನ್ನಾದರೂ ಈಗ ಕೊಡಲು ನಿರಾಕರಿಸಿದರೆ ಅಂಥವರ ವಿರುದ್ಧ ದೇವನಾಣೆಗೂ ನಾನು ಖಡ್ಗವನ್ನೆತ್ತಿಯೇ ತೀರುವೆನು ಎಂದಾಗ ಅಲ್ಲಾಹನ ಅನುಗ್ರಹದಿಂದ ಎಲ್ಲಾ ಸಹಾಬಿಗಳು(ರ) ಈ ಸತ್ಯವನ್ನು ಮನಃಪೂರ್ವಕ ಅಂಗೀಕರಿಸಿದರು. ಝಕಾತ್ ಸಲ್ಲಿಸದಾತನ ವಿರುದ್ಧ ಯುದ್ಧ ಸಾರಬೇಕೆಂದು ಅವರೆಲ್ಲರೂ ಒಪ್ಪಿಕೊಂಡರು. ಝಕಾತ್ ಸಲ್ಲಿಸದಿರುವುದು ಪರಲೋಕ ವಿಶ್ವಾಸವನ್ನು ನಿರಾಕರಿಸುವ ಮುಶ್ರಿಕರ (ಬಹುದೇವ ವಿಶ್ವಾಸಿಗಳ) ಕಾರ್ಯವೆಂದು ಕುರ್‌ಆನ್ ಸ್ಪಷ್ಟೋಕ್ತಿಗಳಿಂದ ಸಾರಿ ಹೇಳುತ್ತಿದೆ:

وَوَيْلٌ لِّلْمُشْرِكِينَ ۝٦ الَّذِينَ لَا يُؤْتُونَ الزَّكَوٰةَ وَهُم بِالْآخِرَةِ هُمْ كَٰفِرُونَ ۝٧

"ಝಕಾತ್ ನೀಡದ ಮತ್ತು ಪರಲೋಕವನ್ನು ನಿರಾಕರಿಸುವ ಬಹುದೇವಾರಾಧಕರಿಗೆ ವಿನಾಶ ಕಾದಿದೆ." (ಹಾಮೀಮ್ ಅಸ್ಸಜ್ದ:: 6,7)



# ಝಕಾತ್‌ನ ವಾಸ್ತವಿಕತೆ

ಮುಸ್ಲಿಮ್ ಬಾಂಧವರೇ!

ನಮಾಝಿನ ಬಳಿಕ ಇಸ್ಲಾಮಿನ ಅತಿದೊಡ್ಡ ಆಧಾರಸ್ತಂಭ ಝಕಾತ್ ಆಗಿದೆ. ನಮಾಝನ್ನು ನಿರಾಕರಿಸುವಾತನನ್ನು 'ಕಾಫಿರ್' ಎನ್ನುವಂತೆಯೇ ಝಕಾತನ್ನು ನಿರಾಕರಿಸುವಾತನನ್ನೂ 'ಕಾಫಿರ್' ಎಂದು ಪರಿಗಣಿಸಲಾಗುವುದು. ಮಾತ್ರವಲ್ಲ, ಅಂಥವರ ವಿರುದ್ಧ ಸಹಾಬಿಗಳು ಒಮ್ಮತದಿಂದ ಜಿಹಾದ್ ಮಾಡಿದ್ದರು ಎಂದು ಹಿಂದಿನ ಉಪನ್ಯಾಸದಲ್ಲಿ ವಿವರಿಸಿರುತ್ತೇನೆ.

ಇಂದಿನ ಉಪನ್ಯಾಸದಲ್ಲಿ ಝಕಾತ್‌ನ ವಾಸ್ತವಿಕತೆಯನ್ನು ವಿವರಿಸುತ್ತೇನೆ. ಝಕಾತ್ ಎಂದರೇನು? ಇಸ್ಲಾಮಿನಲ್ಲಿ ಅದಕ್ಕೆ ಇಷ್ಟು ಮಹತ್ವವನ್ನೇಕೆ ಕೊಡಲಾಗಿದೆ ಮತ್ತು ಅಲ್ಲಾಹನ ಮೆಚ್ಚುಗೆ ಪ್ರಾಪ್ತವಾಗುವುದು ಹೇಗೆ? ಎಂಬುದನ್ನು ತಿಳಿಸುವೆನು.

## ಅಲ್ಲಾಹನ ಸಾಮಿಪ್ಯ ಗಳಿಸುವುದು ಹೇಗೆ?

## ಬುದ್ಧಿ-ವಿವೇಕಗಳ ಪರೀಕ್ಷೆ

ಕೆಲವರು ಕಂಡ ಕಂಡವರೊಂದಿಗೆಲ್ಲಾ ಸ್ನೇಹ ಬೆಳೆಸಿಕೊಳ್ಳುವಷ್ಟು ಸರಳ ಸ್ವಭಾವದವರಿರುತ್ತಾರೆ. ತಮ್ಮ ಗೆಳೆಯರು ಗೆಳೆತನಕ್ಕೆ ಯೋಗ್ಯರೇ ಅಲ್ಲವೇ ಎಂದು ಅವರು ಪರೀಕ್ಷಿಸಿಕೊಳ್ಳುವುದಿಲ್ಲ. ಹೆಚ್ಚಾಗಿ ಇಂಥವರು ಗೆಳೆತನದ ವಿಷಯದಲ್ಲಿ ಮೋಸಹೋಗುತ್ತಾರೆ. ಅನೇಕ ವೇಳೆ ಅವರು ನಿರಾಶರಾಗ ಬೇಕಾಗುತ್ತದೆ. ಆದರೆ ಬುದ್ಧಿವಂತರು ತಮಗೆ ಪರಿಚಯವಾಗುವವರನ್ನು ಮುಂದಾಗಿ ಪರೀಕ್ಷಿಸಿಕೊಂಡು ಅನಂತರ ಅವರ ಪೈಕಿ ನಿಷ್ಕಪಟಿ, ನಂಬಿಗಸ್ಥ ಮತ್ತು ಪ್ರಾಮಾಣಿಕನಾದವನೊಂದಿಗೆ ಮಾತ್ರ ಗೆಳೆತನವಿರಿಸಿಕೊಂಡು ಅಯೋಗ್ಯರನ್ನು ತ್ಯಜಿಸಿಬಿಡುತ್ತಾರೆ.

ಅಲ್ಲಾಹ್ ಸರ್ವರಿಗಿಂತಲೂ ಅಧಿಕ ಸುಜ್ಞಾನಿಯೂ ಸುವಿವೇಕಿಯೂ ಆಗಿರುತ್ತಾನೆ. ಅವನು ಕಂಡ ಕಂಡವರನ್ನೆಲ್ಲಾ ಮಿತ್ರರನ್ನಾಗಿ ಮಾಡಿಕೊಂಡು ತನ್ನ ಪಕ್ಷದಲ್ಲಿ ಸೇರಿಸಿ, ತನ್ನ ಆಸ್ಥಾನದಲ್ಲಿ ಗೌರವದ ಹಾಗೂ ನಿಕಟ ಸ್ಥಾನಮಾನಗಳನ್ನು ನೀಡುವನೆಂದು ನಿರೀಕ್ಷಿಸುವುದು ಹೇಗೆ? ಚೆನ್ನಾಗಿ ಪರೀಕ್ಷಿಸದೆ ಗೆಳೆಯನ ಆಯ್ಕೆ ಮಾಡದಿರುವುದು ಮಾನವನ ಬುದ್ಧಿವಂತಿಕೆಯ ದ್ಯೋತಕವಾಗಿರುವಾಗ, ಸಕಲ ಸುಜ್ಞಾನ ಸುವಿವೇಕಗಳ ಮೂಲವಾದ ಅಲ್ಲಾಹನು ಚೆನ್ನಾಗಿ

ಪರೀಕ್ಷಿಸದೆ ಕಂಡಕಂಡವರಿಗೆ ತನ್ನ ಸ್ನೇಹದ ಮಹೋನ್ನತ ಸ್ಥಾನವನ್ನು ಎಂದೂ ಪ್ರಧಾನ ಮಾಡಲಾರನು, ಜಗತ್ತಿನಾದ್ಯಂತ ಹಬ್ಬಿರುವ ಕೋಟ್ಯಾವಧಿ ಜನರಲ್ಲಿ ನಾನಾ ತರದ ಸಜ್ಜನರೂ ದುರ್ಜನರೂ ಸೇರಿಕೊಂಡಿರುವಾಗ, ಇವರೆಲ್ಲರೂ ಇಹದಲ್ಲಿ ಪ್ರತಿನಿಧಿಯ ಸ್ಥಾನವನ್ನೂ ಪರದಲ್ಲಿ ಸಾನ್ನಿಧ್ಯವನ್ನೂ ಬಯಸಲು ಮತ್ತು 'ಹಿಝ್ಬುಲ್ಲಾಹ್' ಅರ್ಥಾತ್ 'ಅಲ್ಲಾಹನ ಪಕ್ಷ' ಎಂಬ ದಿವ್ಯ ಪಕ್ಷಕ್ಕೆ ಸೇರಲು ಅರ್ಹರಾಗಿರಲು ಸಾಧ್ಯವೇ ಇಲ್ಲ. ಅಲ್ಲಾಹನು ಮನುಷ್ಯನನ್ನು ಪರೀಕ್ಷಿಸಲಿಕ್ಕಾಗಿ ತನ್ನ ಮಹೋನ್ನತ ಯುಕ್ತಿಯೊಂದಿಗೆ ಕೆಲವು ಪ್ರಮಾಣಗಳನ್ನೂ ಸತ್ವಪರೀಕ್ಷೆಗಳನ್ನೂ ನಿಶ್ಚಯಿಸಿದ್ದಾನೆ. ಅವುಗಳಲ್ಲಿ ಉತ್ತೀರ್ಣನಾದವನು ಅವನ ಪಕ್ಷದೊಳಗೆ ಸೇರಿಕೊಳ್ಳುವಂತೆಯೂ ಅನುತ್ತೀರ್ಣನಾದವನು ಆ ಪಕ್ಷದಿಂದ ಹೊರಗುಳಿದು ತಾನು ಅದಕ್ಕೆ ಅರ್ಹನಲ್ಲವೆಂಬುದನ್ನು ಸ್ವತಃ ತಿಳಿದುಕೊಳ್ಳುವಂತೆಯೂ ಮಾಡಿರುತ್ತಾನೆ.

ಈ ಪ್ರಮಾಣಗಳು ಯಾವುವು? ಅಲ್ಲಾಹನು ಸ್ವಯಂ ಯುಕ್ತಿಪೂರ್ಣನಾಗಿರುವುದರಿಂದ ಪ್ರಥಮತಃ ಮಾನವನ ಯುಕ್ತಿ ಹಾಗೂ ಬುದ್ಧಿವಂತಿಕೆಯ ಪರೀಕ್ಷೆ ನಡೆಸಲಿಚ್ಛಿಸುತ್ತಾನೆ. ಅವನಿಗೆ ಬುದ್ಧಿ-ವಿವೇಕವೇನಾದರೂ ಇದೆಯೋ ಅಥವಾ ಕೇವಲ ಮೂಢನೋ? ಎಂದು ನೋಡಲಿಚ್ಛಿಸುತ್ತಾನೆ. ಏಕೆಂದರೆ ಅಜ್ಞಾನಿಯೂ ಮೂರ್ಖನೂ ಎಂದೆಂದಿಗೂ ಬುದ್ಧಿವಂತನ ಹಾಗೂ ಯುಕ್ತಿಪೂರ್ಣನ ಗೆಳೆಯನಾಗಿರಲಾರ. ಅಲ್ಲಾಹನನ್ನು ಅವನ ನಿದರ್ಶನಗಳ ಮೂಲಕ ಗುರುತಿಸಿ, ಇವನೇ ತನ್ನ ಪ್ರಭು ಹಾಗೂ ಸೃಷ್ಟಿಕರ್ತನೆಂದೂ ಇವನ ಹೊರತು ಅನ್ಯರಾರೂ ಆರಾಧ್ಯನೂ ರಕ್ಷಕನೂ ಇಷ್ಟಾರ್ಥಗಳನ್ನು ಈಡೇರಿಸುವಾತನೂ ಸಹಾಯಕನೂ ಇಲ್ಲವೆಂದು ತಿಳಿದುಕೊಳ್ಳುವಾತನು- ದೇವವಾಣಿಯನ್ನು ಕೇಳಿದೊಡನೆ ಇದು ತನ್ನೊಡೆಯನ ವಾಣಿಯೇ ಆಗಿರುತ್ತದೆಂದೂ ಇದು ಬೇರಾರದೇ ವಾಣಿ ಆಗಿರಲು ಸಾಧ್ಯವಿಲ್ಲವೆಂದೂ ಅರಿತುಕೊಳ್ಳುವವನು- ನಿಜವಾದ ಪ್ರವಾದಿ ಮತ್ತು ಕಪಟ ಪ್ರವಾದಿಗಳನ್ನು ಅವರ ಜೀವನ, ಅವರ ನಡತೆ, ಅವರ ವ್ಯವಹಾರ, ಅವರ ಬೋಧನೆ ಮತ್ತು ಅದರ ಸಾಧನೆಗಳ ಅಂತರಗಳಿಂದ ಗುರುತಿಸಿ, ತಾನು ಪ್ರವಾದಿಯೆಂದು ಸಾರುತ್ತಿರುವ ಇಂತಿಂತಹ ಮಹಾತ್ಮರು ನಿಜವಾಗಿಯೂ ದೇವನ ವತಿಯಿಂದ ಸನ್ಮಾರ್ಗ ಬೋಧನೆಗಾಗಿ ಬಂದ ಪ್ರವಾದಿಯೆಂದೂ, ಇಂತಿಂತಹ ದುರಾತ್ಮನು ದಾರಿಗೆಡಿಸುವ ಮಹಾ ವಂಚಕನೆಂದೂ ತಿಳಿದುಕೊಳ್ಳುವಾತನು ಬುದ್ಧಿಯ ಪರೀಕ್ಷೆಯಲ್ಲಿ ಉತ್ತೀರ್ಣನಾಗುತ್ತಾನೆ. ಅಲ್ಲಾಹನು ಅಂಥವನನ್ನು ಜನ ಜಂಗುಳಿಯಿಂದ ಪ್ರತ್ಯೇಕಿಸಿ, ಆಯ್ದು ತೆಗೆದು ತನ್ನ ಪಕ್ಷದ ಆಯ್ದ ವ್ಯಕ್ತಿಗಳ ಸಾಲಲ್ಲಿ ಸೇರಿಸಿಕೊಳ್ಳುತ್ತಾನೆ. ಈ ಪ್ರಥಮ ಪರೀಕ್ಷೆಯಲ್ಲೇ ಅನುತ್ತೀರ್ಣರಾದವರನ್ನು ಇಷ್ಟಬಂದಲ್ಲಿ ಅಲೆದಾಡಲು ಬಿಟ್ಟು ಬಿಡಲಾಗುತ್ತದೆ.

## ಚಾರಿತ್ರ್ಯ ಶಕ್ತಿಯ ಪರೀಕ್ಷೆ

ಈ ಪ್ರಥಮ ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳು ಎರಡನೆಯ ಪರೀಕ್ಷೆಗೊಳಗಾಗಬೇಕಾಗುತ್ತದೆ. ಈ ಪರೀಕ್ಷೆಯಲ್ಲಿ ಅವರ ಬುದ್ಧಿಯೊಂದಿಗೆ ಚಾರಿತ್ರ್ಯದ ಪರೀಕ್ಷೆಯೂ

ನಡೆಯುತ್ತದೆ. ಅವನಲ್ಲಿ ಸತ್ಯ ಮತ್ತು ಪುಣ್ಯ ಕಾರ್ಯಗಳನ್ನು ಆಯ್ಕೆ ಮಾಡಿಕೊಳ್ಳುವ ಹಾಗೂ ಅದರಂತೆ ನಡೆಯುವ ಶಕ್ತಿಯೂ, ಮಿಥ್ಯ ಮತ್ತು ಪಾಪ ಕಾರ್ಯಗಳನ್ನು ಅರಿತುಕೊಂಡು ಅವುಗಳನ್ನು ವರ್ಜಿಸುವ ಸಾಮರ್ಥ್ಯವೂ ಇದೆಯೋ ಇಲ್ಲವೋ ಎಂದು ನೋಡಲಾಗುತ್ತದೆ. ಈತನು ತನ್ನ ದೇಹೇಚ್ಛೆಗಳ, ಹಿರಿಯರ ಅಂಧಾನುಕರಣೆಯ, ಮನೆತನದ ಸಂಪ್ರದಾಯಗಳ ಮತ್ತು ಪ್ರಚಲಿತ ರೀತಿ ರಿವಾಜುಗಳ ದಾಸನಾಗಿಲ್ಲವಷ್ಟೇ? ಒಂದು ವಿಷಯವು ದೇವೇಚ್ಛೆಗೆ ವಿರುದ್ಧವಾಗಿದ್ದು ಅದು ಕೆಟ್ಟದೆಂದು ತಿಳಿದಿದ್ದೂ ಅದಕ್ಕೆ ಬಲಿಬೀಳುವಂತಹ ದೌರ್ಬಲ್ಯ ಅವನಲ್ಲಿಲ್ಲವಷ್ಟೇ? ಇನ್ನೊಂದು ವಿಷಯದ ಬಗ್ಗೆ, ಅದು ಅಲ್ಲಾಹನ ದೃಷ್ಟಿಯಲ್ಲಿ ಸತ್ಯವೂ ಆತನು ಮೆಚ್ಚುವಂತಹದ್ದೂ ಆಗಿರುತ್ತದೆಂದು ತಿಳಿದಿದ್ದೂ ಅವನು ಅದನ್ನು ತಿರಸ್ಕರಿಸ ಲಾರನಷ್ಟೇ? ಈ ಪರೀಕ್ಷೆಯಲ್ಲಿ ಸೋತವರನ್ನು ಅಲ್ಲಾಹ್ ತನ್ನ ಪಕ್ಷದಲ್ಲಿ ಸೇರಿಸಿಕೊಳ್ಳಲು ನಿರಾಕರಿಸುತ್ತಾನೆ.

فَمَنْ يَّكْفُرْ بِالطَّاغُوْتِ وَيُؤْمِنْ بِاللّٰهِ فَقَدِ اسْتَمْسَكَ بِالْعُرْوَةِ الْوُثْقٰى لَا انْفِصَامَ لَهَا

"ತಾಗೂತನ್ನು (ದೇವೇತರ ಶಕ್ತಿಗಳನ್ನು) ನಿರಾಕರಿಸಿ, ಅಲ್ಲಾಹನಲ್ಲಿ ವಿಶ್ವಾಸವಿರಿಸಿ ದಾತನು ಎಂದೆಂದಿಗೂ ಮುರಿಯದಂತಹ ಬಲವಾದ ಆಧಾರವನ್ನು ಆರಿಸಿಕೊಂಡನು" (ಅಲ್‌ಬಕರಃ 256) ಎಂಬಂತಿರುವವರನ್ನು ಮಾತ್ರ ಆತನು ಆರಿಸಿ ಕೊಳ್ಳುತ್ತಾನೆ. ಅರ್ಥಾತ್- ಅಲ್ಲಾಹನ ಮಾರ್ಗದರ್ಶನದ ವಿರುದ್ಧ ಯಾವ ಮಾರ್ಗ ಅಥವಾ ಪದ್ಧತಿಯೇ ಇರಲಿ, ಅದನ್ನು ಯಾರ ಪರಿವೆಯೂ ಇಲ್ಲದೆ ಧೈರ್ಯದಿಂದ ತ್ಯಜಿಸಬೇಕು. ಇತರರು ಕೋಪಿಸಲಿ, ಸಂತೋಷ ಪಡಲಿ ಅಲ್ಲಾಹನು ತೋರಿಸಿದ ಪಥದಲ್ಲೇ ನಡೆಯಬೇಕು.

## ಅನುಸರಣೆಯ ಪರೀಕ್ಷೆ

ಈ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಮೂರನೇ ಹಂತದ ಪರೀಕ್ಷೆಗೊಳಗಾಗ ಬೇಕಾಗುತ್ತದೆ. ಈ ಹಂತದಲ್ಲಿ ದಾಸ್ಯ-ಅನುಸರಣೆ ಹಾಗೂ ವಿಧೇಯತೆಯ ಪರೀಕ್ಷೆ ನಡೆಯುತ್ತದೆ. ಅಲ್ಲಾಹನ ಕಡೆಯಿಂದ ಕರೆ ಕೊಡಲ್ಪಟ್ಟಾಗಲೆಲ್ಲಾ ನಿಮ್ಮ ಸುಖ ನಿದ್ರೆಯನ್ನು ಬಿಟ್ಟು ಹಾಜರಾಗಿರಿ. ನಿಮ್ಮ ಕೆಲಸ ಕಾರ್ಯಗಳನ್ನು ಬದಿಗಿರಿಸಿ ಬನ್ನಿರಿ. ನಿಮ್ಮ ಅಭಿರುಚಿ ಗಳನ್ನೂ ಲಾಭಗಳನ್ನೂ ಆತ್ಮಾನಂದವನ್ನೂ ವಿರಾಮವನ್ನೂ ತೊರೆದು ನಿಮ್ಮ ಮೇಲಿರುವ ಕಡ್ಡಾಯ ವಿಧಿಯನ್ನು ನೆರವೇರಿಸಿರಿ. ವಿಪರೀತ ಸೆಕೆಯಿರಲಿ, ನಡುಗಿಸುವ ಚಳಿಯಿರಲಿ, ನಿಮ್ಮನ್ನು ಕರ್ತವ್ಯ ಪಾಲನೆಗಾಗಿ ಕರೆದಾಗ ಸಕಲ ಕಷ್ಟಗಳನ್ನೂ ಸಹಿಸಲು ಸಿದ್ಧರಾಗಿ ಧಾವಿಸಿ ಬನ್ನಿರಿ. ಅಲ್ಲಾಹನು ನಿಮಗೆ ಮುಂಜಾವಿನಿಂದ ಸಂಜೆಯ ತನಕ ಹಸಿವು ದಾಹಗಳನ್ನು ಸಹಿಸಬೇಕೆಂದೂ ದೇಹೇಚ್ಛೆಗಳನ್ನು ನಿಯಂತ್ರಿಸಬೇಕೆಂದೂ ಅಪ್ಪಣೆ ಕೊಟ್ಟಾಗ ಅದನ್ನು ಸಂಪೂರ್ಣವಾಗಿ ಪಾಲಿಸಿರಿ. ಹಸಿವು ದಾಹಗಳಿಂದ ನೀವೆಷ್ಟು ಕಂಗೆಟ್ಟಿದ್ದರೂ ಸವಿಯಾದ ಭೋಜನ ಸಾಮಗ್ರಿಗಳು ಹಾಗೂ ರುಚಿಯಾದ ಪಾನೀಯಗಳು ನಿಮ್ಮೆದುರೇ ಇದ್ದರೂ ಸರಿಯೆ. ಈ ಪರೀಕ್ಷೆಯಲ್ಲಿ

ವಿಫಲರಾಗುವವರೊಡನೆಯೂ "ನಮಗೆ ನಿಮ್ಮ ಅಗತ್ಯವಿಲ್ಲ" ಎಂದು ತಿಳಿಸಿಬಿಡಲಾಗುತ್ತದೆ. ತೇರ್ಗಡೆ ಹೊಂದಿದವರನ್ನು ಮಾತ್ರ ಆಯ್ದುಕೊಳ್ಳಲಾಗುತ್ತದೆ. ಅಲ್ಲಾಹನ ವತಿಯಿಂದ ತಮಗಾಗಿ ಸಿದ್ಧಪಡಿಸಲಾಗುವ ನಿಯಮ ಮತ್ತು ಆಜ್ಞೆಗಳನ್ನು ಅಂತರಂಗದಲ್ಲೂ ಬಹಿರಂಗದಲ್ಲೂ, ಲಾಭವಿದ್ದರೂ ನಷ್ಟವುಂಟಾದರೂ, ಸುಖದಲ್ಲೂ ಕಷ್ಟದಲ್ಲೂ ಎಲ್ಲಾ ಪರಿಸ್ಥಿತಿಗಳಲ್ಲಿಯೂ ಪಾಲಿಸುವರೆಂದು ಇಂತಹವರಿಂದ ಮಾತ್ರ ನಿರೀಕ್ಷಿಸಬಹುದು.

## ಆರ್ಥಿಕ ತ್ಯಾಗದ ಪರೀಕ್ಷೆ

ಇದಾದ ಬಳಿಕ ನಾಲ್ಕನೆಯದು ಸೊತ್ತು-ವಿತ್ತಗಳ ತ್ಯಾಗದ ಪರೀಕ್ಷೆ. ಮೂರನೆಯ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ತಕ್ಷಣವೇ ಅಲ್ಲಾಹನ ಸೇವೆಗೆ ಅಧಿಕೃತವಾಗಿ ಸೇರಿಸಿ ಕೊಳ್ಳಲು ಅರ್ಹರಾಗಿರುವುದಿಲ್ಲ. ಅವರಿನ್ನೂ ಸಂಕುಚಿತ ಮನಸ್ಸಿನವರೇ? ಧೃತಿಗೆಡುವವರೇ? ಹೇಡಿಗಳೇ? ತಿಳಿಗೇಡಿಗಳೇ? ಎಂದೂ ಪರೀಕ್ಷಿಸಬೇಕಾಗಿದೆ. ಅವರು ಕೇವಲ ಸ್ನೇಹಾಚಾರ ಪ್ರದರ್ಶಿಸುವುದರಲ್ಲಿ ಮಾತ್ರ ನಿಸ್ಸೀಮರಾಗಿದ್ದು, ತಮ್ಮ ಆಪ್ತನಿಗಾಗಿ ಕಿಸೆಯಿಂದೇನಾದರೂ ಖರ್ಚು ಮಾಡುವ ಪ್ರಸಂಗ ಬಂದಾಗ ಹಿಂದೆ ಸರಿಯುವಂತಹ ಜಿಪುಣರಲ್ಲವಷ್ಟೇ? ಇಂತಹ ಸ್ವಾರ್ಥಿ, ಧನಾರಾಧಕ ಮತ್ತು ಸಂಕುಚಿತ ಮನಸ್ಸಿನವರನ್ನು ಸಾಮಾನ್ಯ ಮಟ್ಟದ ವಿವೇಕ ವುಳ್ಳವನೂ ತನ್ನ ಸ್ನೇಹಿತನನ್ನಾಗಿ ಸ್ವೀಕರಿಸುವುದಿಲ್ಲ. ಒಬ್ಬ ಉದಾರಿಯಂತೂ ಇಂತಹ ಕೆಳಮಟ್ಟ ದವನಿಗೆ ತನ್ನ ಬಳಿ ಜಾಗ ಕೊಡಲೂ ಇಷ್ಟಪಡಲಾರ, ಹೀಗಿರುವಾಗ ಪ್ರತಿಕ್ಷಣಕ್ಕೂ ಅಗಣಿತ ಜೀವರಾಶಿಗಳ ಮೇಲೆ ಅನಂತ ಅನುಗ್ರಹಗಳ ಸುರಿಮಳೆಗೆರೆಯುವಂತಹ ಪೂಜ್ಯನೂ ಪರಮ ಶ್ರೇಷ್ಠನೂ ಆದ ಅಲ್ಲಾಹನು, ಅವನೇ ಕೊಟ್ಟ ಸಂಪತ್ತನ್ನು ಅವನ ಮಾರ್ಗದಲ್ಲಿ ಖರ್ಚು ಮಾಡಲು ಹಿಂಜರಿಯುವಂಥವನನ್ನು ತನ್ನ ಪ್ರೀತಿಪಾತ್ರ ಸ್ನೇಹಿತನೆಂದು ಭಾವಿಸುವುದಾದರೂ ಹೇಗೆ? ಅತ್ಯಂತ ಮಹಾ ಸುಜ್ಞಾನಿಯೂ ಯುಕ್ತಿಪೂರ್ಣನೂ ಆದ ಅಲ್ಲಾಹ್ ಕೇವಲ ಮಾತಿನ ಮಲ್ಲನೂ ನಂಬಿಕೆಗೆ ಅನರ್ಹನೂ ಆದಂಥವನನ್ನು ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವು ದೆಂತು? ಆದುದರಿಂದ ಈ ನಾಲ್ಕನೆಯ ಪರೀಕ್ಷೆಯಲ್ಲಿ ಅನುತ್ತೀರ್ಣನಾದವನೊಡನೆ ಅಲ್ಲಾಹನ ಪಕ್ಷದಲ್ಲಿ ನಿನಗೆ ಸ್ಥಾನವಿಲ್ಲವೆಂದೂ, ದೇವ ಪ್ರತಿನಿಧಿಗೆ ವಹಿಸಿಕೊಡುವಂತಹ ಅತಿ ಮಹತ್ವದ ಹೊಣೆಯನ್ನು ವಹಿಸುವ ಅರ್ಹತೆ ನಿನ್ನಲ್ಲಿಲ್ಲವೆಂದೂ ಅಲ್ಲಾಹನ ಮೇಲಿನ ಅಗಾಧ ಪ್ರೇಮ ಕ್ಕಾಗಿ ತನ್ನನ್ನೂ ತನ್ನ ಸಂಪತ್ತು, ಸಂತತಿ, ಕುಲ, ದೇಶವೇ ಮೊದಲಾದ ಸರ್ವಸ್ವದ ಪ್ರೇಮ ವನ್ನೂ ಬಲಿ ಕೊಡಲು ಸಿದ್ಧರಾದವರು ಮಾತ್ರ ಈ ಪಕ್ಷದಲ್ಲಿ ಸೇರಿಸಲ್ಪಡುತ್ತಾರೆಂದೂ ಖಂಡತುಂಡವಾಗಿ ಹೇಳಿ ಬಿಡಲಾಗುತ್ತದೆ.

لَنْ تَنَالُوا الْبِرَّ حَتّٰى تُنْفِقُوْا مِمَّا تُحِبُّوْنَ

"ನೀವು ನಿಮಗೆ ಬಹಳ ಪ್ರಿಯವಾಗಿರುವ ವಸ್ತುಗಳನ್ನು (ಅಲ್ಲಾಹನ ಮಾರ್ಗದಲ್ಲಿ) ವ್ಯಯಿಸುವ ತನಕವೂ ಪುಣ್ಯ ಮಟ್ಟವನ್ನು ತಲಪಲಾರಿರಿ." (ಆಲಿ ಇಮ್‌ರಾನ್: 92)

## ಹಿಝ್ಬುಲ್ಲಾಹ್(ಅಲ್ಲಾಹನ ಪಕ್ಷ) ಸೇರಲು ಅಪೇಕ್ಷಿತ ಗುಣಗಳು

**1. ಸಂಕುಚಿತ ಮನಸ್ಸಿನವರಾಗಿರಬಾರದು**

ಈ ಪಕ್ಷದಲ್ಲಿ ಸಂಕುಚಿತ ಮನಸ್ಸಿನವರಿಗೆ ಸ್ಥಾನವಿಲ್ಲ. ಇದರಲ್ಲಿ ವಿಶಾಲ ಹೃದಯಿಗಳು ಮಾತ್ರ ಪ್ರವೇಶ ಪಡೆಯುತ್ತಾರೆ -

وَمَنْ يُّوْقَ شُحَّ نَفْسِهٖ فَاُولٰٓئِكَ هُمُ الْمُفْلِحُوْنَ ⑨

"ವಾಸ್ತವದಲ್ಲಿ ಯಾರು ತಮ್ಮ ಮನಸ್ಸಿನ ಸಂಕುಚಿತತೆಯಿಂದ ರಕ್ಷಿಸಲ್ಪಟ್ಟರೋ ಅವರೇ ವಿಜಯಿಗಳು." (ಅಲ್‌ಹಶ್ರ್: 9)

**2. ಉದಾರ ಹೃದಯಿಯಾಗಿರಬೇಕು**

ಒಬ್ಬನು ತನ್ನ ಮೇಲೆ ಹಗೆ ಸಾಧಿಸಿದ್ದರೂ, ತನ್ನನ್ನು ನಷ್ಟಕ್ಕೆ ಗುರಿಪಡಿಸಿದ್ದರೂ, ತನ್ನ ಮನನೋಯಿಸಿದ್ದರೂ, ಅವನಿಗೆ ಅಲ್ಲಾಹನ ಮೆಚ್ಚುಗೆಗಾಗಿ ಹೊಟ್ಟೆಗೆ ಹಿಟ್ಟನ್ನೂ ಮೈಗೆ ಬಟ್ಟೆಯನ್ನೂ ಕೊಡಲು ನಿರಾಕರಿಸದಂಥವರೂ, ಅವನ ಕಷ್ಟಕಾಲದಲ್ಲಿ ಸಹಾಯ ನೀಡಲು ಹಿಂಜರಿಯದಂತಹ ಔದಾರ್ಯವುಳ್ಳವರೂ ಇಲ್ಲಿ ಬೇಕಾಗಿದ್ದಾರೆ-

وَلَا يَأْتَلِ اُولُوا الْفَضْلِ مِنْكُمْ وَالسَّعَةِ اَنْ يُّؤْتُوْٓا اُولِى الْقُرْبٰى

وَالْمَسٰكِيْنَ وَالْمُهٰجِرِيْنَ فِيْ سَبِيْلِ اللّٰهِ ۖ وَلْيَعْفُوْا وَلْيَصْفَحُوْا ۗ اَلَا تُحِبُّوْنَ

اَنْ يَّغْفِرَ اللّٰهُ لَكُمْ ۗ وَاللّٰهُ غَفُوْرٌ رَّحِيْمٌ ㉒

"ನಿಮ್ಮಲ್ಲಿ ಅನುಗ್ರಹೀತರು ಮತ್ತು ಸಾಮರ್ಥ್ಯವುಳ್ಳವರು ತಮ್ಮ ಸಂಬಂಧಿಕರಿಗೂ ದರಿದ್ರರಿಗೂ ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋಗುವವರಿಗೂ ಸಹಾಯ ಮಾಡಲಿಕ್ಕಿಲ್ಲವೆಂದು ಪ್ರತಿಜ್ಞೆ ಮಾಡಿ ಬಿಡಬಾರದು. ಅವರನ್ನು ಕ್ಷಮಿಸಿ ಬಿಡಬೇಕು ಮತ್ತು ಮನ್ನಿಸಬೇಕು. ಅಲ್ಲಾಹ್ ನಿಮ್ಮನ್ನು ಕ್ಷಮಿಸಬೇಕೆಂದು ನೀವು ಇಚ್ಛಿಸುವುದಿಲ್ಲವೇ? ಅಲ್ಲಾಹ್ ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ."*

(ಅನ್ನೂರ್: 22)

---

*ಹ. ಅಬೂಬಕರ್‌ರ(ರ) ಸಂಬಂಧಿಕನೋರ್ವನು ಅವರ ಸುಪುತ್ರಿ ಹ. ಆಯಿಶಾರ(ರ) ಮೇಲೆ ಅಪವಾದ ಹೊರಿಸುವ ಸಂಚಿನಲ್ಲಿ ಪಾಲುಗೊಂಡಿದ್ದನು. ಹ. ಅಬೂಬಕರ್‌ರವರು(ರ) ಅವನ ಈ ವರ್ತನೆಯಿಂದ ಖೇದ ಮತ್ತು ಕೋಪಗೊಂಡು ಅವನಿಗೆ ನೀಡುತ್ತಿದ್ದ ಆರ್ಥಿಕ ಸಹಾಯವನ್ನು ತಡೆ ಹಿಡಿದರು. ಈ ಸೂಕ್ತ ಅವತೀರ್ಣಗೊಂಡಾಗ ಅವರ ಮೇಲೆ ಸಿಡಿಲೆರಗಿದಂತಾಯಿತು. ಅವರು "ನಾನು ಅಲ್ಲಾಹನೊಡನೆ ಕ್ಷಮೆ ಯಾಚಿಸುತ್ತೇನೆ" ಎನ್ನುತ್ತಾ ತಮ್ಮ ಮನಸ್ಸನ್ನು ನೋಯಿಸಿದ ವ್ಯಕ್ತಿಗೆ ಆರ್ಥಿಕ ನೆರವನ್ನು ಮುಂದುವರಿಸಿದರು.

3. ನಿಸ್ವಾರ್ಥಿಯಾಗಿರಬೇಕು

ಇಲ್ಲಿ ಇಂತಹ ನಿಸ್ವಾರ್ಥ ವ್ಯಕ್ತಿಗಳು ಬೇಕಾಗಿದ್ದಾರೆ:

وَيُطْعِمُونَ الطَّعَامَ عَلَىٰ حُبِّهِ مِسْكِينًا وَيَتِيمًا وَأَسِيرًا ﴿٨﴾ إِنَّمَا نُطْعِمُكُمْ لِوَجْهِ اللَّهِ لَا نُرِيدُ مِنكُمْ جَزَاءً وَلَا شُكُورًا ﴿٩﴾

"ಅಲ್ಲಾಹನ ಮೇಲಿನ ಪ್ರೇಮದಿಂದ ದರಿದ್ರರಿಗೂ ಅನಾಥರಿಗೂ ಸೆರೆಯಾಳುಗಳಿಗೂ ಊಟ ಕೊಡುತ್ತಾರೆ. (ಮತ್ತು ಅವರೊಡನೆ ಹೇಳುತ್ತಾರೆ) ನಾವು ನಿಮಗೆ ಕೇವಲ ಅಲ್ಲಾಹನಿಗಾಗಿ ಉಣಿಸುತ್ತಿದ್ದೇವೆ. ನಾವು ನಿಮ್ಮಿಂದ ಯಾವುದೇ ಪ್ರತಿಫಲವನ್ನಾಗಲಿ, ಕೃತಜ್ಞತೆಯನ್ನಾಗಲಿ ಬಯಸುವುದಿಲ್ಲ." (ಅದ್ದಹ್ರ್: 8,9)

4. ಶುದ್ಧ ಹೃದಯಿಯಾಗಿರಬೇಕು

ಇಲ್ಲಿ ದೇವದತ್ತವಾದ ಸಂಪತ್ತಿನಿಂದ ಉತ್ತಮವಾದುದನ್ನು ಪ್ರತ್ಯೇಕಿಸಿ, ದೇವಮಾರ್ಗದಲ್ಲಿ ಕೊಡುವಂತಹ ನಿರ್ಮಲ ಮನಸ್ಸಿನವರು ಬೇಕಾಗಿದ್ದಾರೆ -

يَا أَيُّهَا الَّذِينَ آمَنُوا أَنفِقُوا مِن طَيِّبَاتِ مَا كَسَبْتُمْ وَمِمَّا أَخْرَجْنَا لَكُم مِّنَ الْأَرْضِ وَلَا تَيَمَّمُوا الْخَبِيثَ مِنْهُ تُنفِقُونَ

"ಓ ಸತ್ಯವಿಶ್ವಾಸಿಗಳೇ, ನೀವು ಸಂಪಾದಿಸಿದ ಸಂಪತ್ತಿನಿಂದ ಮತ್ತು ನಾವು ನಿಮಗಾಗಿ ಭೂಮಿಯಿಂದ ಉತ್ಪಾದಿಸಿದವುಗಳಿಂದ ಉತ್ತಮವಾದವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡಿರಿ. ಅವನ ಮಾರ್ಗದಲ್ಲಿ ಕೊಡಲು ಅತ್ಯಂತ ಕೆಟ್ಟ ವಸ್ತುವನ್ನು ಪ್ರತ್ಯೇಕಿಸಿಡಲು ಪ್ರಯತ್ನಿಸಬಾರದು." (ಅಲ್‌ಬಕರ:: 267)

5. ದಾರಿದ್ರ್ಯದಲ್ಲೂ ಖರ್ಚು ಮಾಡುವವರಾಗಿರಬೇಕು

ಅತ್ಯಂತ ದಾರಿದ್ರ್ಯ ಮತ್ತು ಕಷ್ಟದ ಸ್ಥಿತಿಯಲ್ಲಿಯೂ ತನ್ನ ಹೊಟ್ಟೆ ಕಟ್ಟಿ, ಅಲ್ಲಾಹನ ಧರ್ಮದ ಸೇವೆಗಾಗಿಯೂ ಇತರ ದೇವದಾಸರ ಸಹಾಯಕ್ಕಾಗಿಯೂ ಹಣ ಖರ್ಚು ಮಾಡಲು ಕಿಂಚಿತ್ತೂ ಹಿಂಜರಿಯದಂತಹ ಸಾಹಸಿಗಳ ಅಗತ್ಯ ಇಲ್ಲಿದೆ -

وَسَارِعُوا إِلَىٰ مَغْفِرَةٍ مِّن رَّبِّكُمْ وَجَنَّةٍ عَرْضُهَا السَّمَاوَاتُ وَالْأَرْضُ أُعِدَّتْ لِلْمُتَّقِينَ ﴿١٣٣﴾ الَّذِينَ يُنفِقُونَ فِي السَّرَّاءِ وَالضَّرَّاءِ وَالْكَاظِمِينَ الْغَيْظَ وَالْعَافِينَ عَنِ النَّاسِ ۗ وَاللَّهُ يُحِبُّ الْمُحْسِنِينَ ﴿١٣٤﴾

"ನಿಮ್ಮ ಪ್ರಭುವಿನ ಕ್ಷಮೆಯ ಕಡೆಗೆ ಮತ್ತು ಭೂಮಿ-ಆಕಾಶಗಳಷ್ಟು ವಿಶಾಲವಾಗಿರುವ ಸ್ವರ್ಗದ ಕಡೆಗೆ ಧಾವಿಸಿರಿ. ಅದು ದೇವಭಯವುಳ್ಳವರಿಗಾಗಿ ಸಿದ್ಧಗೊಳಿಸಲ್ಪಟ್ಟಿರುತ್ತದೆ. ಅವರು ಸ್ಥಿತಿವಂತರಾಗಿರುವಾಗಲೂ ದುಸ್ಥಿತಿಯಲ್ಲಿರುವಾಗಲೂ ತಮ್ಮ ಸಂಪತ್ತನ್ನು ಖರ್ಚು ಮಾಡುತ್ತಾರೆ, ಕೋಪವನ್ನು ನುಂಗಿಕೊಳ್ಳುತ್ತಾರೆ ಮತ್ತು ಇತರರ ಅಪರಾಧಗಳನ್ನು ಕ್ಷಮಿಸುತ್ತಾರೆ.- ಇಂತಹ ಸಜ್ಜನರು ಅಲ್ಲಾಹನಿಗೆ ಅತ್ಯಂತ ಮೆಚ್ಚುಗೆಯುವರು."

(ಆಲಿ ಇಮ್‌ರಾನ್: 133)

6. ದಾನಶೀಲರಾಗಿರಬೇಕು

ಅಲ್ಲಾಹನ ಮಾರ್ಗದಲ್ಲಿ ಏನಾದರೂ ಖರ್ಚು ಮಾಡಿದರೆ ಅದು ನಷ್ಟವಾಗಿ ಹೋಗದೆಂದೂ, ಅದರ ಅತ್ಯುತ್ತಮ ಪ್ರತಿಫಲವನ್ನು ಅಲ್ಲಾಹನು ಇಹ-ಪರಗಳೆರಡರಲ್ಲೂ ನೀಡುವನೆಂದೂ ಹೃತ್ಪೂರ್ವಕ ನಂಬಿ, ಕೇವಲ ಅಲ್ಲಾಹನ ಮೆಚ್ಚುಗೆಗಾಗಿ ಖರ್ಚು ಮಾಡುವವರೂ ಇಲ್ಲಿ ಬೇಕಾಗಿದ್ದಾರೆ. ಅವರು ತಾವು ಮಾಡಿದ ದಾನ ಧರ್ಮಗಳ ಪ್ರಚಾರ ಆಗಿದೆಯೋ ಇಲ್ಲವೋ, ಅವರ ಉಪಕಾರವನ್ನು ಜನರು ಸ್ಮರಿಸಿದ್ದಾರೋ ಇಲ್ಲವೋ ಎಂಬ ಚಿಂತೆಯನ್ನೇ ಮಾಡದ ಅಪ್ಪಟ ವಿಶ್ವಾಸಿಗಳಾಗಿರುತ್ತಾರೆ -

وَمَا تُنْفِقُوْا مِنْ خَيْرٍ فَلِاَنْفُسِكُمْ ۗ وَمَا تُنْفِقُوْنَ اِلَّا ابْتِغَآءَ وَجْهِ اللّٰهِ ۗ وَمَا تُنْفِقُوْا
مِنْ خَيْرٍ يُّوَفَّ اِلَيْكُمْ وَاَنْتُمْ لَا تُظْلَمُوْنَ ﴿٢٧٢﴾

"ನೀವು ದಾನಧರ್ಮಗಳಲ್ಲಿ ಖರ್ಚು ಮಾಡುವುದೆಲ್ಲಾ ನಿಮ್ಮ ಸ್ವಂತದ ಒಳಿತಿಗಾಗಿ ಮಾತ್ರ. ಅಲ್ಲಾಹನ ಸಂಪ್ರೀತಿಯನ್ನು ಬಯಸಿಯೇ ನೀವು ಖರ್ಚು ಮಾಡುತ್ತೀರಷ್ಟೇ. ಹಾಗಿದ್ದರೆ, ನೀವು ದಾನಧರ್ಮಗಳಲ್ಲಿ ಖರ್ಚು ಮಾಡುವ ಸಂಪತ್ತಿನ ಸಂಪೂರ್ಣ ಪ್ರತಿಫಲ ನಿಮಗೆ ಕೊಡಲಾಗುವುದು. ನಿಮ್ಮ ಹಕ್ಕುಚ್ಯುತಿ ಖಂಡಿತ ಆಗಲಾರದು." (ಅಲ್‌ಬಕರಃ: 272)

7. ಎಲ್ಲ ಸ್ಥಿತಿಯಲ್ಲೂ ಅಲ್ಲಾಹನನ್ನು ಸ್ಮರಿಸುವವರಾಗಿರಬೇಕು

ಐಶ್ವರ್ಯ ಬರಲಿ-ಬಡತನದ ಬೇಗೆಯಿರಲಿ, ಸದಾ ಕಾಲ ಅಲ್ಲಾಹನನ್ನು ಮರೆಯದಂತಹ ಧೀರರೂ ವೀರರೂ ಇಲ್ಲಿ ಬೇಕಾಗಿದ್ದಾರೆ. ಅವರು ಸುಖದ ಸುಪ್ಪತ್ತಿಗೆಗಳಲ್ಲಿ ಆನಂದಿಸುತ್ತಿರುವಾಗಲೂ ಅವರಿಗೆ ಅಲ್ಲಾಹನ ನೆನಪಿರುತ್ತದೆ -

يٰٓاَيُّهَا الَّذِيْنَ اٰمَنُوْا لَا تُلْهِكُمْ اَمْوَالُكُمْ وَلَآ اَوْلَادُكُمْ عَنْ ذِكْرِ اللّٰهِ ۚ
وَمَنْ يَّفْعَلْ ذٰلِكَ فَاُولٰٓئِكَ هُمُ الْخٰسِرُوْنَ ﴿٩﴾

"ಸತ್ಯವಿಶ್ವಾಸಿಗಳೇ, ನಿಮ್ಮ ಸಂಪತ್ತು ಮತ್ತು ನಿಮ್ಮ ಸಂತಾನಗಳು ನಿಮ್ಮನ್ನು ಅಲ್ಲಾಹನ ಸ್ಮರಣೆಯಿಂದ ಅಲಕ್ಷ್ಯಗೊಳಿಸದಿರಲಿ. ಹೀಗೆ ಮಾಡುವವರೇ ನಷ್ಟ ಅನುಭವಿಸುವವರು."

(ಅಲ್ ಮುನಾಫಿಕೂನ್: 9)

ಇವು ಅಲ್ಲಾಹನ ಪಕ್ಷದಲ್ಲಿ ಪ್ರವೇಶ ದೊರೆಯಲು ಅನಿವಾರ್ಯವಾಗಿ ಇರಬೇಕಾದ ಗುಣವಿಶೇಷಗಳು. ಇವುಗಳ ಹೊರತು ಯಾರೂ ಅಲ್ಲಾಹನ ಗೆಳೆಯರ ಸಾಲಿಗೆ ಸೇರಲಾರರು. ವಾಸ್ತವದಲ್ಲಿ ಇವು ಮಾನವನ ಶೀಲ ಚಾರಿತ್ರ್ಯಗಳ ಪಾಲಿಗೆ ಮಾತ್ರವಲ್ಲದೆ ಅವನ ವಿಶ್ವಾಸದ ಪಾಲಿಗೂ ಕಠಿಣ ಪರೀಕ್ಷೆಯಾಗಿರುತ್ತದೆ. ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡಲು ಹಿಂಜರಿಯುವವನು, ಈ ಖರ್ಚನ್ನು ತನ್ನ ಮೇಲೊಂದು ಆರ್ಥಿಕ ದಂಡ ಅಥವಾ ಜುಲ್ಮಾನೆಯೆಂದು ತಿಳಿಯುವವನು, ಆದರಿಂದ ತಪ್ಪಿಸಿಕೊಳ್ಳಲಿಕ್ಕಾಗಿ ವಿವಿಧ ನೆಪಗಳನ್ನು ಹುಡುಕುವವನು ಮತ್ತು ಒಂದು ವೇಳೆ ಏನಾದರೂ ಖರ್ಚು ಮಾಡಿದರೂ ತನಗುಂಟಾದ ಮನೋಸಂಕಟದ ಉರಿಯನ್ನು ಇತರರ ಮೇಲೆ ಉಪಕಾರ ಭಾರವನ್ನು ಹೊರಿಸಿ ನೀಗಿಸಿಕೊಳ್ಳುವವನು ಅಥವಾ ಎಲ್ಲೆಲ್ಲೂ ತನ್ನ ದಾನ ಧರ್ಮಗಳ ಪ್ರಚಾರ ಆಗಬೇಕೆಂದು ಬಯಸುವವನು ವಾಸ್ತವದಲ್ಲಿ ಅಲ್ಲಾಹ್ ಮತ್ತು ಆಖಿರತ್‌ನ (ಪರಲೋಕ) ಮೇಲೆ ವಿಶ್ವಾಸವೇ ಇಲ್ಲದವನಾಗಿದ್ದಾನೆ. ಅವನು ತಾನು ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡಿದ್ದೆಲ್ಲಾ ವ್ಯರ್ಥವಾಗಿ ಹೋಯಿತೆಂದೆಣಿಸುತ್ತಾನೆ. ಅವನಿಗೆ ತನ್ನ ಸುಖಭೋಗಗಳು, ಪ್ರಮೋದಗಳು, ತನ್ನ ಲಾಭಗಳು ಮತ್ತು ತನ್ನ ಖ್ಯಾತಿ ಅಲ್ಲಾಹನ ಮತ್ತು ಆತನ ಮೆಚ್ಚುಗೆಗಿಂತಲೂ ಅಧಿಕ ಪ್ರಿಯವಾಗಿರುತ್ತವೆ. ಇರುವುದೆಲ್ಲಾ ಈ ಜೀವನದಲ್ಲೇ- ಆದ್ದರಿಂದ ತಾನು ಏನಾದರೂ ಹಣ ಖರ್ಚು ಮಾಡಿದರೆ ಅದರ ಪ್ರತಿಫಲ ಪಡೆಯಲು ಈ ಲೋಕದಲ್ಲೇ ಜನಪ್ರಿಯತೆಯೂ ಕೀರ್ತಿಯೂ ಸಿಗಬೇಕು. ಇಲ್ಲವಾದರೆ ತನಗೆ ಹಣ ನಷ್ಟವಾಗುವುದು ಮಾತ್ರವಲ್ಲ, ಈ ಮಹಾನುಭಾವ ಇಂತಿಂತಹ ಸತ್ಕಾರ್ಯಗಳಿಗಾಗಿ ಇಂತಿಷ್ಟು ಹಣ ಖರ್ಚು ಮಾಡಿದ್ದಾರೆಂಬುದು ಯಾರಿಗೂ ತಿಳಿಯದೆ ಹೋದರೆ ಎಲ್ಲವೂ ಮಣ್ಣು ಪಾಲಾದಂತೆಯೇ ಸರಿ ಎಂಬುದೇ ಅವನ ವಿಚಾರಧಾರೆಯಾಗಿರುತ್ತದೆ. ಇಂತಹ ವ್ಯಕ್ತಿ ಅಲ್ಲಾಹನ ಯಾವ ಕೆಲಸಕ್ಕೂ ಬಾರದವನೆಂದು ಕುರ್‌ಆನಿನಲ್ಲಿ ಸ್ಪಷ್ಟವಾಗಿ ಹೇಳಿದೆ, ಇಂಥವನು ತಾನು ಸತ್ಯವಿಶ್ವಾಸಿಯೆಂದು ಹೇಳಿಕೊಳ್ಳುತ್ತಿರುವ ನೆಂದಾದರೆ ಅವನು 'ಮುನಾಫಿಕ್' (ಕಪಟವಿಶ್ವಾಸಿ) ಆಗಿದ್ದಾನೆ. ಈ ನಿಟ್ಟಿನಲ್ಲಿ ಕೆಳಗೆ ಕೊಟ್ಟಿರುವ ಸೂಕ್ತವನ್ನು ಗಮನಿಸಿರಿ.

### 8. ಋಣ ಹೊರಿಸುವವರಾಗಿರಬಾರದು

يَٰٓأَيُّهَا ٱلَّذِينَ ءَامَنُوا۟ لَا تُبْطِلُوا۟ صَدَقَٰتِكُم بِٱلْمَنِّ وَٱلْأَذَىٰ كَٱلَّذِى يُنفِقُ

مَالَهُۥ رِئَآءَ ٱلنَّاسِ وَلَا يُؤْمِنُ بِٱللَّهِ وَٱلْيَوْمِ ٱلْءَاخِرِ

"ಓ ಸತ್ಯವಿಶ್ವಾಸಿಗಳೇ, ತನ್ನ ಸಂಪತ್ತನ್ನು ಆಡಂಬರಕ್ಕಾಗಿ ಖರ್ಚು ಮಾಡುವವನಂತೆ ಹಾಗೂ ಅಲ್ಲಾಹ್ ಮತ್ತು ಆಖಿರತ್‌ನಲ್ಲಿ(ಪರಲೋಕ) ವಿಶ್ವಾಸವಿರಿಸದವನ ಹಾಗೆ ಉಪಕಾರ ಭಾರವಿರಿಸಿಯೂ ಮನ ನೋಯಿಸಿಯೂ ನಿಮ್ಮ ದಾನ ಧರ್ಮಗಳನ್ನು ನೀವು ನಿಷ್ಫಲಗೊಳಿಸಿ ಕೊಳ್ಳಬೇಡಿರಿ."

(ಅಲ್‌ಬಕರಃ: 264)

9. ಧನ ಸಂಗ್ರಹಿಸಿಡಬಾರದು

وَالَّذِيْنَ يَكْنِزُوْنَ الذَّهَبَ وَالْفِضَّةَ وَلَا يُنْفِقُوْنَهَا فِيْ سَبِيْلِ اللّٰهِ ۙ

فَبَشِّرْهُمْ بِعَذَابٍ اَلِيْمٍ ۙ

"ಚಿನ್ನವನ್ನೂ ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ದೇವ ಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ." (ಅತ್ತೌಬಃ: 34)

10. ಅಲ್ಲಾಹನ ಮಾರ್ಗದಲ್ಲಿ ಮೈಗಳ್ಳರಾಗಿರಬಾರದು

لَا يَسْتَاْذِنُكَ الَّذِيْنَ يُؤْمِنُوْنَ بِاللّٰهِ وَالْيَوْمِ الْاٰخِرِ اَنْ يُّجَاهِدُوْا بِاَمْوَالِهِمْ

وَاَنْفُسِهِمْ ۗ وَاللّٰهُ عَلِيْمٌۢ بِالْمُتَّقِيْنَ ۝ اِنَّمَا يَسْتَاْذِنُكَ الَّذِيْنَ لَا يُؤْمِنُوْنَ بِاللّٰهِ

وَالْيَوْمِ الْاٰخِرِ وَارْتَابَتْ قُلُوْبُهُمْ فَهُمْ فِيْ رَيْبِهِمْ يَتَرَدَّدُوْنَ ۝

"ಅಲ್ಲಾಹ್ ಮತ್ತು ನಿರ್ಣಾಯಕ ದಿನದ ಮೇಲೆ ವಿಶ್ವಾಸವಿಡುವವರು ತಮಗೆ ತನು-ಧನಗಳೊಂದಿಗೆ ಹೋರಾಟ ನಡೆಸುವುದರಿಂದ ವಿನಾಯತಿ ನೀಡಬೇಕೆಂದು ಎಂದೆಂದಿಗೂ ವಿನಂತಿಸಲಾರರು. ಅಲ್ಲಾಹ್ ಧರ್ಮನಿಷ್ಠರನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ. ಅಲ್ಲಾಹ್ ಮತ್ತು ಅಂತಿಮ ದಿನದ ಮೇಲೆ ವಿಶ್ವಾಸವಿರಿಸದವರು ಮಾತ್ರ ಇಂತಹ ನಿವೇದನೆಗಳನ್ನು ಮಾಡುತ್ತಾರೆ. ಅವರ ಹೃದಯಗಳಲ್ಲಿ ಸಂಶಯವಿದೆ. ಅವರು ತಮ್ಮ ಸಂಶಯಗಳಲ್ಲೇ ತಲ್ಲಣಗೊಳ್ಳುತ್ತಿದ್ದಾರೆ." (ಅತ್ತೌಬಃ: 44, 45)

11. ಮನಃಪೂರ್ವಕ ಆಜ್ಞಾಪಾಲನೆ ಮಾಡುವವರಾಗಿರಬೇಕು

وَمَا مَنَعَهُمْ اَنْ تُقْبَلَ مِنْهُمْ نَفَقٰتُهُمْ اِلَّآ اَنَّهُمْ كَفَرُوْا بِاللّٰهِ وَبِرَسُوْلِهٖ

وَلَا يَاْتُوْنَ الصَّلٰوةَ اِلَّا وَهُمْ كُسَالٰى وَلَا يُنْفِقُوْنَ اِلَّا وَهُمْ كٰرِهُوْنَ ۝

"ಅವರು ಅಲ್ಲಾಹ್ ಮತ್ತು ಅವನ ರಸೂಲರನ್ನು ನಿಷೇಧಿಸಿದರು. ಅವರು ನಮಾಝಿಗೆ ಆಲಸ್ಯದೊಂದಿಗೆ ಬರುತ್ತಾರೆ. ದೇವ ಮಾರ್ಗದಲ್ಲಿ ಒಲ್ಲದ ಮನಸ್ಸಿನಿಂದ ಖರ್ಚು ಮಾಡುತ್ತಾರೆ. ಇದರ ಹೊರತು ಅವರ ಸಂಪತ್ತು ಸ್ವೀಕರಿಸದಿರಲು ಇನ್ನಾವ ಕಾರಣವೂ ಇಲ್ಲ."

(ಅತ್ತಾಬಃ: 54)

اَلْمُنٰفِقُوْنَ وَالْمُنٰفِقٰتُ بَعْضُهُمْ مِّنْۢ بَعْضٍ ۘ يَاْمُرُوْنَ بِالْمُنْكَرِ وَيَنْهَوْنَ

عَنِ الْمَعْرُوْفِ وَيَقْبِضُوْنَ اَيْدِيَهُمْ ۗ نَسُوا اللّٰهَ فَنَسِيَهُمْ ۗ اِنَّ الْمُنٰفِقِيْنَ هُمُ الْفٰسِقُوْنَ ﴿٦٧﴾

"ಕಪಟವಿಶ್ವಾಸಿ ಪುರುಷರೂ ಕಪಟವಿಶ್ವಾಸಿ ಸ್ತ್ರೀಯರೂ ಪರಸ್ಪರ ಅನ್ಯೋನ್ಯರು. ಅವರು ಕೆಡುಕಿನ ಆಜ್ಞೆ ಕೊಡುತ್ತಾರೆ, ಒಳಿತುಗಳಿಂದ ತಡೆಯುತ್ತಾರೆ ಮತ್ತು ತಮ್ಮ ಕೈಗಳನ್ನು ಸತ್ಕಾರ್ಯಗಳಿಂದ ತಡೆದಿಡುತ್ತಾರೆ. ಅವರು ಅಲ್ಲಾಹನನ್ನು ಮರೆತುಬಿಟ್ಟರು. ಆಗ ಅಲ್ಲಾಹನೂ ಅವರನ್ನು ಮರೆತುಬಿಟ್ಟನು. ನಿಶ್ಚಯವಾಗಿಯೂ ಈ ಕಪಟವಿಶ್ವಾಸಿಗಳೇ ಕರ್ಮಭ್ರಷ್ಟರು."

(ಅತ್ತಾಬಃ: 67)

12. ದೇವ ಮಾರ್ಗದ ದಾನವನ್ನು ಶಿಕ್ಷೆ ಎಂದು ಭಾವಿಸಬಾರದು

وَمِنَ الْاَعْرَابِ مَنْ يَّتَّخِذُ مَا يُنْفِقُ مَغْرَمًا

"ಅಲ್ಲಾಹನ ಮಾರ್ಗದಲ್ಲಿ ಒಂದಿಷ್ಟು ಖರ್ಚು ಮಾಡಿದರೂ ಅದನ್ನು ಬಲಾತ್ಕಾರದ ದಂಡನೆಯೆಂದು ತಿಳಿದುಕೊಳ್ಳುವವರೂ ಈ ಬದವೀ ಅರಬರಲ್ಲಿದ್ದಾರೆ."

(ಅತ್ತಾಬಃ: 98)

13. ಜಿಪುಣರಾಗಿರಬಾರದು

هٰۤاَنْتُمْ هٰۤؤُلَاۤءِ تُدْعَوْنَ لِتُنْفِقُوْا فِيْ سَبِيْلِ اللّٰهِ ۚ فَمِنْكُمْ مَّنْ

يَّبْخَلُ ۚ وَمَنْ يَّبْخَلْ فَاِنَّمَا يَبْخَلُ عَنْ نَّفْسِهٖ ۗ وَاللّٰهُ الْغَنِيُّ وَاَنْتُمُ

الْفُقَرَاۤءُ ۚ وَاِنْ تَتَوَلَّوْا يَسْتَبْدِلْ قَوْمًا غَيْرَكُمْ ۙ ثُمَّ لَا يَكُوْنُوْۤا اَمْثَالَكُمْ ﴿٣٨﴾

"ನೋಡಿರಿ, ಅಲ್ಲಾಹನ ಮಾರ್ಗದಲ್ಲಿ ಸಂಪತ್ತನ್ನು ಖರ್ಚು ಮಾಡಬೇಕೆಂದು ನಿಮಗೆ ಕರೆ ನೀಡಲಾಗುತ್ತಿದೆ. ಈ ಬಗ್ಗೆ ನಿಮ್ಮಲ್ಲಿ ಕೆಲವರು ಜಿಪುಣತೆ ತೋರುತ್ತಿದ್ದಾರೆ. ಜಿಪುಣತೆ ತೋರುವಾತನು ವಾಸ್ತವದಲ್ಲಿ ತನ್ನ ಮೇಲೆ ತಾನೇ ಜಿಪುಣತೆ ತೋರುತ್ತಿದ್ದಾನೆ. ಅಲ್ಲಾಹನಂತೂ

ನಿರಪೇಕ್ಷನು. ನೀವೇ ಅವನ ಅವಲಂಬಿತರು. ನೀವು ವಿಮುಖರಾದರೆ ಅಲ್ಲಾಹನು ನಿಮ್ಮ ಸ್ಥಾನದಲ್ಲಿ ಬೇರಾವುದಾದರೂ ಜನಾಂಗವನ್ನು ತರುವನು ಮತ್ತು ಅವರು ನಿಮ್ಮಂತೆ ಇರಲಾರರು."

(ಮುಹಮ್ಮದ್: 38)

ಮುಸ್ಲಿಮ್ ಬಾಂಧವರೇ! ಇದು ನಿಮ್ಮ ಧರ್ಮದ ಆಧಾರ ಸ್ತಂಭಗಳಲ್ಲೊಂದಾದ 'ಝಕಾತ್'ನ ವಾಸ್ತವಿಕತೆ. ಇದನ್ನು ಇಲ್ಲಿಯ ಸರಕಾರಗಳು ವಿಧಿಸುತ್ತಿರುವ ತೆರಿಗೆಯಂತಹ ಒಂದು ತೆರಿಗೆಯೆಂದು ತಿಳಿಯಬೇಡಿರಿ. ಇದು ವಾಸ್ತವದಲ್ಲಿ ಇಸ್ಲಾಮಿನ ಜೀವಾಳವಾಗಿದೆ. ಇದು ಯಥಾರ್ಥದಲ್ಲಿ ಈಮಾನಿನ ಪರೀಕ್ಷೆಯಾಗಿದೆ. ಒಬ್ಬನು ಒಂದೊಂದೇ ಪರೀಕ್ಷೆ ಎದುರಿಸುತ್ತಾ ಪ್ರಗತಿ ಹೊಂದುತ್ತಾ ಕೊನೆಗೊಂದು ಪರೀಕ್ಷೆ ಎದುರಿಸಿ ಪದವೀಧರನಾಗುವಂತೆಯೇ ಅಲ್ಲಾಹನೂ ಅನೇಕ ಪರೀಕ್ಷೆಗಳನ್ನಿಟ್ಟಿರುತ್ತಾನೆ. ಈ ಪರೀಕ್ಷೆಗಳನ್ನು ಒಂದೊಂದಾಗಿ ಎದುರಿಸಬೇಕಾಗುತ್ತದೆ. ಅವನ ಈ ನಾಲ್ಕನೆಯ ಪರೀಕ್ಷೆ ಅರ್ಥಾತ್ ಧನತ್ಯಾಗದ ಪರೀಕ್ಷೆಯಲ್ಲಿ ಉತ್ತೀರ್ಣನಾದವನು ಪೂರ್ಣ ಮುಸ್ಲಿಮನಾಗುತ್ತಾನೆ. ಇದೂ ಕೊನೆಯ ಪರೀಕ್ಷೆಯಲ್ಲ. ಮುಂದೆ ಇದಕ್ಕಿಂತಲೂ ಕಠಿಣವಾದ ಪ್ರಾಣತ್ಯಾಗದ ಪರೀಕ್ಷೆಯಿದೆ. ಅದನ್ನು ಮುಂದೆ ವಿವರಿಸಲಿರುವೆನು. ಆದರೆ ಇಸ್ಲಾಮಿನ ಗಡಿಯೊಳಗೆ ಪ್ರವೇಶಿಸಲು ಅಲ್ಲಾಹನ ಪಕ್ಷದಲ್ಲಿ ಪ್ರವೇಶ ಸಿಗಲು ನಿಶ್ಚಯಿಸಲ್ಪಟ್ಟಿರುವ ಪರೀಕ್ಷೆಗಳಲ್ಲಿ ಇದು ಕೊನೆಯದು. "ಧರ್ಮ ಬೋಧಕರು ಮುಸ್ಲಿಮರಿಗೆ ಹಣ ಖರ್ಚು ಮಾಡಬೇಕೆಂಬ ಉಪದೇಶವನ್ನೇನೋ ಧಾರಾಳ ಮಾಡಿದ್ದಾರೆ. ಈಗ ಮುಸ್ಲಿಮರ ಈ ದಾರಿದ್ರ್ಯಾವಸ್ಥೆಯಲ್ಲಿ ಅವರಿಗೆ ಹಣ ಸಂಪಾದಿಸುವ ಮತ್ತು ಹಣ ಸಂಗ್ರಹಿಸುವ ಉಪದೇಶ ನೀಡಲಿ" ಎಂದು ಇತ್ತೀಚೆಗೆ ಕೆಲವರು ಹೇಳತೊಡಗಿದ್ದಾರೆ. ಆದರೆ ಅವರು ಹೀಗೆ ಯಾವುದರ ಬಗ್ಗೆ ಸಿಡಿಮಿಡಿಗೊಳ್ಳುತ್ತಿರುವರೋ ಅದುವೇ ಇಸ್ಲಾಮಿನ ಜೀವಾಳವೆಂಬುದನ್ನು ಅವರು ಅರಿತಿಲ್ಲ. ಈ ಜೀವಾಳದ ಅಭಾವವೇ ಮುಸ್ಲಿಮರನ್ನು ಅಧೋಗತಿಗಿಳಿಸಿತು. ಈ ಜೀವಾಳವು ಅವರನ್ನು ಬೀಳಿಸಿದುದರಿಂದ ಅವರು ಬಿದ್ದು ಹೋದುದಲ್ಲ. ಈ ಜೀವಾಳವು ಕಳೆದು ಹೋದುದರಿಂದಲೇ ಅವರು ಬಿದ್ದು ಹೋದರು.

ಮುಂದಿನ ಉಪನ್ಯಾಸಗಳಲ್ಲಿ ಝಕಾತ್ (ಕಡ್ಡಾಯ ದಾನ) ಮತ್ತು ಸದಕಾತ್ (ಐಚ್ಛಿಕ ದಾನಗಳು) ಯಥಾರ್ಥವಾಗಿ ನಮ್ಮ ಸಾಮೂಹಿಕ ಜೀವನದ ಜೀವನಾಡಿಯಾಗಿರುವುದು ಹೇಗೆಂದೂ, ಪರಲೋಕದ ಮಾತ್ರವಲ್ಲ ಇಹಲೋಕದ ಸೌಭಾಗ್ಯಗಳೂ ಇದರಲ್ಲಿ ಹೇಗೆ ಅಡಕವಾಗಿವೆಯೆಂದೂ ವಿವರಿಸುವೆನು. (ಇನ್‌ಶಾ ಅಲ್ಲಾಹ್)



# ಸಾಮೂಹಿಕ ಜೀವನದಲ್ಲಿ ಝಕಾತಿನ ಸ್ಥಾನ

ಮುಸ್ಲಿಮ್ ಬಾಂಧವರೇ!

ಇದಕ್ಕಿಂತ ಮುಂಚಿನ ಎರಡು ಉಪನ್ಯಾಸಗಳಲ್ಲಿ ಝಕಾತಿನ ನಿಜ ಸ್ವರೂಪವನ್ನು ವಿವರಿಸಿರುತ್ತೇನೆ. ಈಗ ಅದರ ಇನ್ನೊಂದು ಪಾರ್ಶ್ವದ ಕಡೆಗೆ ಬೆಳಕು ಬೀರುವೆನು.

## ಅಲ್ಲಾಹನ ಔದಾರ್ಯ

ಕುರ್‌ಆನಿನಲ್ಲಿ ಝಕಾತ್ (ಕಡ್ಡಾಯ ದಾನ) ಮತ್ತು ಸದಕಾತ್ (ಐಚ್ಛಿಕ ದಾನ)ಗಳಿಗೆ ಅಲ್ಲಲ್ಲಿ 'ಇನ್ಫಾಕ್ ಫೀಸಬೀಲಿಲ್ಲಾಃ' ಎಂಬ ಪದ ಉಪಯೋಗಿಸಲ್ಪಟ್ಟಿದೆ. ಅರ್ಥಾತ್ "ದೇವ ಮಾರ್ಗದಲ್ಲಿ ವ್ಯಯಿಸುವುದು." ನೀವು ದೇವ ಮಾರ್ಗದಲ್ಲಿ ವ್ಯಯಿಸುವುದೆಲ್ಲಾ ಅಲ್ಲಾಹನ ಲೆಕ್ಕದಲ್ಲಿ ಉತ್ತಮ ಸಾಲವಾಗಿರುವುದೆಂದು ಕೆಲವು ಕಡೆ ಹೇಳಲಾಗಿದೆ. ನೀವು ಅಲ್ಲಾಹನಿಗೆ ಸಾಲ ಕೊಡುತ್ತೀರಿ ಮತ್ತು ಅಲ್ಲಾಹ್ ನಿಮ್ಮ ಸಾಲಗಾರನಾಗಿ ಬಿಡುತ್ತಾನೆ ಎಂಬಂತಿದೆ ಈ ಮಾತು. ದೇವ ಮಾರ್ಗದಲ್ಲಿ ನೀವು ಏನನ್ನು ಕೊಟ್ಟರೂ ಅದು ಅಲ್ಲಾಹನ ಲೆಕ್ಕಕ್ಕಾಗಿದ್ದು ಅವನು ಅಷ್ಟನ್ನು ಮಾತ್ರ ನಿಮಗೆ ಮರಳಿಸುವುದಲ್ಲ; ಅದಕ್ಕಿಂತ ಬಹುಪಟ್ಟು ಹೆಚ್ಚು ನಿಮಗೆ ಮರಳಿಸುವನೆಂದು ಅನೇಕ ಕಡೆಗಳಲ್ಲಿ ತಿಳಿಸಲಾಗಿದೆ. ಸ್ವಲ್ಪ ಆಲೋಚಿಸಿರಿ, ಭೂಮಿ-ಆಕಾಶಗಳ ಮಾಲಿಕನು ನಿಮ್ಮ ಸಹಾಯಾಪೇಕ್ಷಕನೇ? ಅವನಂತಹ ಸರ್ವೋನ್ನತ ದಾತನಿಗೆ ನಿಮ್ಮಿಂದ ಸಾಲ ಪಡೆಯುವ ಅಗತ್ಯವಿದೆಯೇ? ಆ ರಾಜಾಧಿರಾಜ ಹಾಗೂ ಅನಂತ ಭಂಡಾರದ ಮಾಲಿಕನು ನಿಮ್ಮೊಡನೆ ತನಗಾಗಿ ಏನನ್ನಾದರೂ ಕೇಳುತ್ತಾನೆಯೇ? ಅವನ ಕೊಡುಗೆಗಳಿಂದಲೇ ನೀವು ಪೋಷಿಸಲ್ಪಡುತ್ತಿರುವಿರಿ. ಅವನು ನೀಡಿದ ಜೀವನಾಧಾರಗಳನ್ನೇ ನೀವು ಉಣ್ಣುತ್ತಿರುವಿರಿ- ನೀವು ಧನಿಕರಾಗಿರಲಿ, ಬಡವರಾಗಿರಲಿ. ನಿಮ್ಮಲ್ಲಿರುವ ಸರ್ವಸ್ವವೂ ಅವನ ಕೊಡುಗೆಯೇ. ದರಿದ್ರರಿಂದ ಕೋಟ್ಯಾಧೀಶನ ತನಕ ಪ್ರತಿಯೊಬ್ಬನೂ ಅವನ ಸಹಾಯಾಪೇಕ್ಷಕನಾಗಿರುತ್ತಾನೆ. ಅವನಾದರೋ ಯಾರ ಸಹಾಯಾಪೇಕ್ಷಕನೂ ಅಲ್ಲ. ಅವನಿಗೆ ನಿಮ್ಮಿಂದ ಸಾಲ ಪಡೆಯುವ ಮತ್ತು ನಿಮ್ಮೆದುರು ಕೈಚಾಚುವ ಅಗತ್ಯವಾದರೂ ಏನಿದೆ? ಅವನ ಮಹಾ ಔದಾರ್ಯವನ್ನು ಗಮನಿಸಿರಿ. ಅವನು ನಿಮ್ಮಿಂದ ನಿಮ್ಮ ಲಾಭಕ್ಕಾಗಿ, ನಿಮ್ಮ ಒಳಿತಿಗಾಗಿ ಮತ್ತು ನಿಮ್ಮ ಕಾರ್ಯಕ್ಕಾಗಿ ಖರ್ಚು ಮಾಡಲು ಹೇಳಿ, "ಆ ಖರ್ಚು ನನ್ನ ಮಾರ್ಗದಲ್ಲಾಗಿರುತ್ತದೆ. ಅದು ನನ್ನ ಮೇಲೆ ಸಾಲ. ನನ್ನ ಬಳಿ ಅದರ ಪ್ರತಿಫಲವಿದೆ. ನಾನು ನಿಮ್ಮ ಉಪಕಾರವನ್ನು ಸ್ಮರಿಸುತ್ತೇನೆ. ನೀವು ನಿಮ್ಮ ಸಮುದಾಯದ

ದರಿದ್ರರಿಗೂ ನಿರ್ಗತಿಕರಿಗೂ ಕೊಡಿರಿ. ಅದರ ಪ್ರತಿಫಲವನ್ನು ಆ ಬಡ ಜನರು ಎಲ್ಲಿಂದ ಕೊಟ್ಟಾರು? ಅವರ ಕಡೆಯಿಂದ ನಾನು ಕೊಡುವೆನು. ನೀವು ನಿಮ್ಮ ಬಡ ಸಂಬಂಧಿಕರಿಗೆ ಸಹಾಯ ಮಾಡಿರಿ. ಆ ಋಣಭಾರ ಅವರ ಮೇಲಿಲ್ಲ. ಅದು ನನ್ನ ಮೇಲಿದೆ. ಆ ಋಣಭಾರವನ್ನು ನಾನು ಇಳಿಸುವೆನು. ನೀವು ನಿಮ್ಮ ಅನಾಥರಿಗೂ ವಿಧವೆಯರಿಗೂ ಅಂಗಹೀನರಿಗೂ ಪ್ರಯಾಣಿಕರಿಗೂ ಕಷ್ಟ ಕಾರ್ಪಣ್ಯಗಳಿಗೊಳಗಾದ ಸಹೋದರರಿಗೂ ಕೊಟ್ಟುದೆಲ್ಲವನ್ನೂ ನನ್ನ ಲೆಕ್ಕಕ್ಕೆ ಬರೆದಿಟ್ಟುಕೊಳ್ಳಿರಿ. ನಾನದನ್ನು ತೀರಿಸುವೆನು. ನೀವು ಆರ್ಥಿಕ ಮುಗ್ಗಟ್ಟಿಗೊಳಗಾದ ಬಂಧುಗಳಿಗೆ ಸಾಲ ಕೊಡಿರಿ. ಅವರಿಂದ ಬಡ್ಡಿ ಕೇಳಬೇಡಿರಿ. ಅವರನ್ನು ಸತಾಯಿಸಬೇಡಿರಿ. ಅವರು ಮರುಪಾವತಿ ಮಾಡಲು ಅಸಮರ್ಥರಾದರೆ ಅವರನ್ನು ಸೆರೆಮನೆಗೆ ಕಳುಹಿಸಬೇಡಿರಿ. ಅವರ ಪಾತ್ರೆಗಳನ್ನೂ ಇತರ ವಸ್ತುಗಳನ್ನೂ ಹರಾಜು ಮಾಡಿಸಬೇಡಿರಿ. ಅವರ ಮಕ್ಕಳು ಮರಿಗಳನ್ನು ಮನೆಯಿಂದ ಹೊರಕ್ಕಟ್ಟಬೇಡಿರಿ. ನೀವು ಕೊಟ್ಟ ಸಾಲ ಅವರ ಮೇಲಿಲ್ಲ ಅದು ನನ್ನ ಮೇಲಿದೆ. ಅವರು ಅಸಲನ್ನು ಪಾವತಿ ಮಾಡಿದರೆ ಅವರ ಕಡೆಯಿಂದ ಬಡ್ಡಿಯನ್ನು ನಾನು ಕೊಡುವೆನು. ಅವರು ಅಸಲನ್ನೂ ಕೊಡಲು ಅಸಮರ್ಥರಾದರೆ ನಾನು ಅಸಲು ಬಡ್ಡಿಗಳೆರಡನ್ನೂ ನಿಮಗೆ ಕೊಡುವೆನು. ಇದೇ ರೀತಿಯಲ್ಲಿ ಸಾಮೂಹಿಕ ಅಭಿವೃದ್ಧಿ ಕಾರ್ಯಗಳಿಗೆ ನಿಮ್ಮ ಸಹಜೀವಿಗಳ ಕಲ್ಯಾಣಕ್ಕಾಗಿ ನೀವು ಖರ್ಚು ಮಾಡುವುದರ ಫಲ ನಿಮಗೇ ಸಿಗುವುದಿದ್ದರೂ ಅದರ ಋಣಭಾರ ನನ್ನ ಮೇಲಿದೆ. ನಾನು ಚಿಕ್ಕಾಸನ್ನೂ ಇಟ್ಟುಕೊಳ್ಳದೆ ಲಾಭಸಹಿತ ಮರುಪಾವತಿ ಮಾಡುವೆನು" ಎನ್ನುತ್ತಾನೆ.

ಆ ಮಹಾ ಉದಾತ್ತನಾದ ರಾಜಾಧಿರಾಜನ ಔದಾರ್ಯವಿದು. ನಿಮ್ಮಲ್ಲಿರುವುದೆಲ್ಲಾ ಅವನ ಕೊಡುಗೆ. ನೀವು ಬೇರೆ ಯಾರಿಂದಲೂ ಏನನ್ನೂ ಪಡೆಯುವುದಿಲ್ಲ. ಎಲ್ಲವನ್ನೂ ಅವನ ಕೋಶಾಗಾರದಿಂದಲೇ ಪಡೆಯುತ್ತೀರಿ. ನೀವು ಏನು ಕೊಡುವುದಿದ್ದರೂ ಅವನಿಗಲ್ಲ. ನಿಮ್ಮ ಸ್ವಂತ ಬಂಧು ಬಳಗದವರಿಗೂ ನಿಮ್ಮ ಸೋದರರಿಗೂ ನಿಮ್ಮ ಸಮುದಾಯದ ಜನರಿಗೂ ಕೊಡುತ್ತೀರಿ ಅಥವಾ ನಿಮ್ಮದೇ ಸಾಮೂಹಿಕ ಅಭಿವೃದ್ಧಿ ಕಾರ್ಯಗಳಿಗಾಗಿ ವಿನಿಯೋಗಿಸುತ್ತೀರಿ. ಅವುಗಳ ಫಲವೂ ಕೊನೆಗೆ ನಿಮಗೇ ಸಿಗುತ್ತದೆ. ಆದರೆ ಆ ಮಹಾ ಶ್ರೇಷ್ಠ ದಾನಿಯ ಔದಾರ್ಯವನ್ನು ನೋಡಿರಿ. ನೀವು ಅವನಿಂದ ಪಡೆದು ನಿಮ್ಮವರಿಗೆ ಕೊಡುವುದನ್ನು ಅವನು, "ನೀವು ನನಗೆ ಕೊಟ್ಟಿರಿ. ನನ್ನ ಮಾರ್ಗದಲ್ಲಿ ಕೊಟ್ಟಿರಿ. ನನಗೆ ಸಾಲ ಕೊಟ್ಟಿರಿ. ನಾನು ಅದರ ಪ್ರತಿಫಲ ಕೊಡುವೆನು" ಎನ್ನುತ್ತಾನೆ. ಅಲ್ಲಾಹು ಅಕ್ಬರ್! ಇಷ್ಟು ಉನ್ನತ ಮಟ್ಟದ ಔದಾರ್ಯ ಮತ್ತು ದಾನಶೀಲತೆಯು ಆ ನಿರಪೇಕ್ಷ ಪ್ರಭುವಿನಿಂದ ಮಾತ್ರ ಅಭಿವ್ಯಕ್ತಗೊಳ್ಳಬಲ್ಲುದೇ ವಿನಾ ಮಾನವನಿಂದ ಈ ಮಟ್ಟದ ಔನ್ನತ್ಯವನ್ನು ಊಹಿಸಲಿಕ್ಕೂ ಸಾಧ್ಯವಿಲ್ಲ.

## ದಾನದ ಬೋಧನೆ ಏಕೆ?

ಅಲ್ಲಾಹನು ಮಾನವನನ್ನು ಪುಣ್ಯ ಹಾಗೂ ದಾನಶೀಲತೆಯ ಸದ್ಗುಣಗಳನ್ನು ಹೊಂದುವಂತೆ ಪ್ರೇರೇಪಿಸಲಿಕ್ಕಾಗಿ ಈ ಕ್ರಮವನ್ನು ಏಕೆ ಕೈಗೊಂಡನೆಂದು ಊಹಿಸಿರಿ. ಈ ಪ್ರಶ್ನೆಯ ಬಗ್ಗೆ ಎಷ್ಟು ಹೆಚ್ಚು ಚಿಂತಿಸುವಿರೋ ಅಷ್ಟೇ ಹೆಚ್ಚಾಗಿ ಇಸ್ಲಾಮೀ ಶಿಕ್ಷಣದ ಪಾವಿತ್ರ್ಯವು

ಸ್ಪಷ್ಟವಾಗುತ್ತಾ ಬಂದು ಇಂತಹ ಅಪ್ರತಿಮ ಶಿಕ್ಷಣವು ಅಲ್ಲಾಹನ ಹೊರತು ಬೇರೆ ಯಾರ ಕಡೆಯಿಂದಲೂ ಬಂದಿರಲಿಕ್ಕೆ ಸಾಧ್ಯವಿಲ್ಲವೆಂದು ನಿಮ್ಮ ಅಂತಃಕರಣ ಸಾಕ್ಷ್ಯ ನುಡಿಯುವುದು.

## ಮಾನವನ ಸ್ವಾರ್ಥ ಸ್ವಭಾವ

ಮಾನವನು ಸ್ವಭಾವತಃ ಅಕ್ರಮಿ ಮತ್ತು ಅಜ್ಞಾನಿಯಾಗಿದ್ದಾನೆ. ಅವನ ದೃಷ್ಟಿ ಸೀಮಿತ. ಹೆಚ್ಚು ದೂರದ ವರೆಗೆ ನೋಡಲು ಅವನಿಗೆ ಸಾಧ್ಯವಾಗುವುದಿಲ್ಲ. ಅವನ ಮನಸ್ಸು ಸಂಕುಚಿತ. ಹೆಚ್ಚು ಉನ್ನತ ವಿಚಾರಗಳು ಅವನ ಮನಸ್ಸಿನಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿ ಮಾತ್ರ ಹಿಡಿಸುತ್ತದೆ. ಅವನು ಸ್ವಾರ್ಥಿ. ಸ್ವತಃ ತನ್ನ ಲಾಭದ ಬಗ್ಗೆಯೂ ಯಾವುದೇ ವಿಶಾಲ ಭಾವನೆ ಅವನ ಮನಸ್ಸಿನಲ್ಲಿ ಉಂಟಾಗುವುದಿಲ್ಲ. ಅವನು ದುಡುಕು ಸ್ವಭಾವದವನು.

خُلِقَ الْإِنسَانُ مِنْ عَجَلٍ

"ಮನುಷ್ಯನು ದುಡುಕು ಸ್ವಭಾವದವನಾಗಿ ಸೃಷ್ಟಿಸಲ್ಪಟ್ಟಿದ್ದಾನೆ."

(ಅಲ್ ಅಂಬಿಯಾ: 37)

ಎಲ್ಲಾ ಕಾರ್ಯಗಳ ಫಲಿತಾಂಶವನ್ನೂ ಪ್ರಯೋಜನಗಳನ್ನೂ ಅವನು ತಕ್ಷಣವೇ ಕಾಣ ಬಯಸುತ್ತಾನೆ. ಕ್ಷಿಪ್ರವಾಗಿ ಸಿಗುವ ಮತ್ತು ಇಂದ್ರಿಯಾನುಭವಕ್ಕೆ ಬರುವ ಪ್ರಯೋಜನವನ್ನು ಮಾತ್ರ ಪ್ರಯೋಜನವೆಂದು ತಿಳಿಯುತ್ತಾನೆ. ತಡವಾಗಿ ಸಿಗುವ ಫಲಿತಾಂಶಗಳ ಕಡೆಗೆ ಅವನ ದೃಷ್ಟಿ ಎಟಕುವುದಿಲ್ಲ. ಅತ್ಯಧಿಕವಾಗಿ ಮತ್ತು ನಿರಂತರವಾಗಿ ಸಿಗಬಹುದಾದ ಲಾಭಗಳ ಕಡೆಗೆ ಅವನ ಗಮನ ಹರಿಯುವುದು ಬಹು ಪ್ರಯಾಸದಿಂದ; ಕೆಲವೊಮ್ಮೆ ಇಲ್ಲವೆಂದೇ ಹೇಳಬಹುದು. ಇದು ಮಾನವನ ಸ್ವಾಭಾವಿಕ ದೌರ್ಬಲ್ಯ. ಈ ದೌರ್ಬಲ್ಯದ ಪರಿಣಾಮವಾಗಿ ಪ್ರತಿಯೊಂದು ವಿಷಯದಲ್ಲಿಯೂ ಅವನು ತನ್ನ ಸ್ವಂತ ಲಾಭವನ್ನೇ ನೋಡುತ್ತಾನೆ. ಅದರಲ್ಲೂ ಅತ್ಯಲ್ಪ ವಾಗಿರುವ, ಕ್ಷಿಪ್ರವಾಗಿ ಸಿಗುವ ಮತ್ತು ಇಂದ್ರಿಯಾನುಭವಕ್ಕೆ ಬರುವ ಲಾಭವನ್ನು ಮಾತ್ರ. ತಾನು ಸಂಪಾದಿಸಿದುದು ಅಥವಾ ತನಗೆ ಹಿರಿಯರಿಂದ ಸಿಕ್ಕಿದುದೆಲ್ಲಾ ತನ್ನದೇ ಆಗಿದ್ದು, ಅದರಲ್ಲಿ ಬೇರಾರಿಗೂ ಪಾಲಿಲ್ಲ. ಅದು ನನ್ನ ಅವಶ್ಯಕತೆಗಳಿಗಾಗಿ, ನನ್ನ ಇಚ್ಛೆಗಳಿಗಾಗಿ, ನನ್ನ ಭೋಗಾ ಭಿಲಾಷೆಗಳಿಗಾಗಿ ವ್ಯಯವಾಗಬೇಕು. ಇಲ್ಲವೇ ಕ್ಷಿಪ್ರವಾಗಿ ಮತ್ತು ಇಂದ್ರಿಯಾನುಭವಕ್ಕೆ ಬರುವ ಲಾಭದ ರೂಪದಲ್ಲಿ ನನಗೆ ಮರಳಿ ಬರುವಂತಹ ಕಾರ್ಯಗಳಲ್ಲಿ ವ್ಯಯವಾಗಬೇಕು. ನಾನು ಹಣ ಖರ್ಚು ಮಾಡಿದರೆ ಅದರ ಪ್ರತಿಫಲ ಹಣದ ರೂಪದಲ್ಲೇ ನನಗೆ ಹಿಂದಕ್ಕೆ ಸಿಗಬೇಕು ಅಥವಾ ಅದರಿಂದ ನನ್ನ ಸುಖಭೋಗಗಳಲ್ಲಿ ವೃದ್ಧಿಯಾಗಬೇಕು; ನನಗೆ ಗೌರವ ಸಿಗಬೇಕು. ನನಗೆ ಯಾವುದಾದರೂ ಬಿರುದು ಬಾವಲಿಗಳು ಸಿಗಬೇಕು. ಉನ್ನತ ಸ್ಥಾನಮಾನಗಳು ದೊರಕಬೇಕು. ಜನರು ನನ್ನ ಮುಂದೆ ತಲೆಬಾಗಬೇಕು. ಜನರು ನನ್ನ ವಿಷಯವಾಗಿಯೇ ಮಾತಾಡುತ್ತಿರುವಂತಾಗಬೇಕು. ಇವುಗಳ ಪೈಕಿ ಯಾವುದೂ ನನಗೆ ಸಿಗಲಾರದೆಂದಾದರೆ ನಾನು ನನ್ನ ಹಣವನ್ನೇಕೆ ಕೊಡಬೇಕು? ಸಮೀಪದಲ್ಲೇ ತಬ್ಬಲಿಯು ಹಸಿವೆಯಿಂದ ಸಾಯುತ್ತಿರು

ವನಾದರೆ ಸಾಯಲಿ, ಗತಿಗೆಟ್ಟು ಅಲೆದಾಡುತ್ತಿದ್ದರೆ ಇರಲಿ, ನಾನೇಕೆ ಅವನಿಗಾಗಿ ಚಿಂತಿಸಬೇಕು? ಅವನಿಗೆ ಬೇಕಾದ ವ್ಯವಸ್ಥೆಯನ್ನು ಅವನ ಅಪ್ಪನೇ ಮಾಡಿ ಸಾಯಬೇಕಿತ್ತು. ಅವನು ತನ್ನ ಮಕ್ಕಳಿಗೇನಾದರೂ ಮಾಡಿಟ್ಟು ಅಥವಾ ವಿಮೆ ಮಾಡಿಟ್ಟು ಸಾಯಬೇಕಿತ್ತು. ನನ್ನ ನೆರೆಹೊರೆಯಲ್ಲಿ ವಿಧವೆಯರು ಪಾಡು ಪಡುತ್ತಿದ್ದರೆ ನನಗೇನು? ಅವಳ ಗಂಡನು ಅವಳ ಬಗ್ಗೆ ಯೋಚಿಸಬೇಕಿತ್ತು. ಪ್ರಯಾಣಿಕನೊಬ್ಬನು ಕಷ್ಟಕ್ಕೀಡಾಗಿದ್ದಾನೆಂದಾದರೆ ಇರಲಿ, ಆ ಮೂರ್ಖನು ತನ್ನ ಪ್ರಯಾಣಕ್ಕೆ ಸರಿಯಾದ ವ್ಯವಸ್ಥೆ ಮಾಡಿಕೊಳ್ಳದೆ ಮನೆಯಿಂದ ಹೊರಟದ್ದೇ ಏಕೆ? ಯಾರಾದರೂ ಕಷ್ಟ-ಕಾರ್ಪಣ್ಯಗಳಿಗೆ ಬಲಿಯಾಗಿದ್ದಾನೆಂದಾದರೆ ಇರಲಿ. ದೇವನು ನನಗೆ ಕೈ ಕಾಲುಗಳನ್ನು ಕೊಟ್ಟಂತೆಯೇ ಅವನಿಗೂ ಕೊಟ್ಟಿದ್ದಾನೆ. ಅವನ ಅವಶ್ಯಕತೆಗಳನ್ನು ಅವನು ಸ್ವತಃ ಪೂರೈಸಿಕೊಳ್ಳಬೇಕು; ಅವನಿಗೆ ನಾನೇಕೆ ಸಹಾಯ ನೀಡಲಿ? ಒಂದು ವೇಳೆ ನಾನು ಅವನಿಗೆ ಕೊಡುವುದಿದ್ದರೂ ಸಾಲ ರೂಪದಲ್ಲಿ ಕೊಟ್ಟೇನು. ಅಸಲಿನೊಂದಿಗೆ ಬಡ್ಡಿಯನ್ನೂ ವಸೂಲು ಮಾಡುವೆನು. ಏಕೆಂದರೆ ನನ್ನಲ್ಲಿರುವ ಹಣ ವ್ಯರ್ಥವೇನೂ ಅಲ್ಲ. ನಾನು ಅದರಿಂದ ಒಂದು ಮನೆ ಕಟ್ಟುತ್ತಿದ್ದೆ, ವಾಹನ ಕೊಂಡುಕೊಳ್ಳುತ್ತಿದ್ದೆ ಅಥವಾ ಅದನ್ನು ಇತರ ಲಾಭದಾಯಕ ಕಾರ್ಯದಲ್ಲಿ ವಿನಿಯೋಗಿಸುತ್ತಿದ್ದೆ. ಅವನೂ ಇದರಿಂದ ಒಂದಲ್ಲೊಂದು ವಿಧದಿಂದ ಲಾಭವನ್ನೇ ಪಡೆಯುವನಲ್ಲವೇ? ನಾನು ಅವನ ಲಾಭದಿಂದ ನನ್ನ ಪಾಲನ್ನೇಕೆ ವಸೂಲು ಮಾಡಬಾರದು? ಎಂದು ಅವನು ವಾದಿಸುತ್ತಾನೆ.

ಈ ತರದ ಸ್ವಾರ್ಥ ಮನೋವೃತ್ತಿಯನ್ನು ಹೊಂದಿದ ಹಣವಂತನು ಕೊಪ್ಪರಿಗೆ ಸರ್ಪವಾಗಿರುತ್ತಾನೆ. ಅವನು ಖರ್ಚು ಮಾಡುವುದಿದ್ದರೆ ತನ್ನ ಲಾಭಕ್ಕಾಗಿ ಮಾತ್ರ, ಸ್ವಂತ ಲಾಭವೇನೂ ತೋರದಿದ್ದಲ್ಲಿ ಅವನು ತನ್ನ ಕಿಸೆಯಿಂದ ಚಿಕ್ಕಾಸನ್ನೂ ಹೊರ ತೆಗೆಯಲಾರ, ಎಲ್ಲಾದರೂ ಅಪ್ಪಿತಪ್ಪಿ ಬಡವನಿಗೆ ಸಹಾಯ ಮಾಡಿಬಿಟ್ಟರೂ ಅದರ ಬದಲಿಗೆ ಅವನನ್ನು ಸುಲಿದೇ ಬಿಡುವನು. ತಾನು ಕೊಟ್ಟುದಕ್ಕಿಂತ ಹೆಚ್ಚು ವಸೂಲು ಮಾಡುವನು. ನಿರ್ಗತಿಕನಿಗೇನಾದರೂ ಕೊಟ್ಟುಬಿಟ್ಟರೂ ಅವನ ಮೇಲೆ ಸಾವಿರಾರು ಉಪಕಾರಭಾರಗಳನ್ನಿರಿಸಿ ಅವನನ್ನು ಅರೆಜೀವ ಮಾಡಿಬಿಡುವನು. ಅವನಲ್ಲಿ ಸ್ವಾಭಿಮಾನ ಸ್ವಲ್ಪವೂ ಉಳಿಯದ ಹಾಗೆ ಅವನನ್ನು ನಿಂದಿಸುವನು. ಸಾಮೂಹಿಕ ಕಾರ್ಯಗಳಲ್ಲಿ ಭಾಗವಹಿಸುವಾಗ ಅದರಿಂದ ತನಗೆ ಎಷ್ಟು ಲಾಭ ಬರಬಹುದೆಂದು ಮೊದಲೇ ಲೆಕ್ಕ ಹಾಕಿಕೊಳ್ಳುವನು. ಆ ಕಾರ್ಯಗಳಿಂದ ಇವನ ಸ್ವಂತಕ್ಕೇನೂ ಲಾಭ ಸಿಗದೆಂದಾದರೆ ಅದಕ್ಕೆ ಇವನ ಸಹಾಯ ಸಿಗದು.

## ಸ್ವಾರ್ಥ ಮನೋವೃತ್ತಿಯ ದುಷ್ಪರಿಣಾಮಗಳು

ಇಂತಹ ಮನೋವೃತ್ತಿಯ ಪರಿಣಾಮಗಳೇನು? ಇದರ ಪರಿಣಾಮವು ಸಾಮುದಾಯಿಕ ಜೀವನಕ್ಕೆ ವಿನಾಶಕರ ಮಾತ್ರವೇ ಅಲ್ಲ. ಅವನು ತನಗೆ ಲಾಭದಾಯಕವೆಂದು ತಿಳಿದುಕೊಂಡಿದ್ದ ಈ ಸಂಕುಚಿತ ಮನೋವೃತ್ತಿಯು ಕೊನೆಗೆ ಅವನಿಗೆ ಹಾನಿಕರವಾಗಿ ಪರಿಣಮಿಸುತ್ತದೆ. ಈ ಮನೋವೃತ್ತಿಯು ಜನರಲ್ಲುಂಟಾದಾಗ ಸಂಪತ್ತು ಕೆಲವೇ ಮಂದಿಯ ಕೈಯಲ್ಲಿ ಒಟ್ಟಾಗುತ್ತದೆ.

ಹೆಚ್ಚಿನವರು ನಿರ್ಗತಿಕರಾಗುತ್ತಾರೆ. ಧನಿಕರು ತಮ್ಮ ಧನಬಲದಿಂದ ಹಣ ಹೀರತೊಡಗಿ ಅದರಿಂದ ಬಡವರ ಜೀವನ ದಿನೇ ದಿನೇ ಸಂಕೀರ್ಣವಾಗುತ್ತಾ ಬರುತ್ತದೆ. ಸಮಾಜದಲ್ಲಿ ಬಡತನ ನೆಲೆಸಿದಾಗ ಅದು ನಾನಾ ತರದ ದೋಷಗಳಲ್ಲಿ ಸಿಕ್ಕಿಬೀಳುತ್ತದೆ. ಜನರ ಆರೋಗ್ಯ ಕೆಡುತ್ತದೆ. ರೋಗ ರುಜಿನಗಳು ಹಬ್ಬುತ್ತವೆ. ಸಮಾಜದಲ್ಲಿ ಗಳಿಕೆಯ ಶಕ್ತಿ ಕುಗ್ಗುತ್ತದೆ. ಅಜ್ಞಾನ ವ್ಯಾಪಾಕವಾಗುತ್ತದೆ. ಚಾರಿತ್ರ್ಯ ಕೆಡುತ್ತ ಬರುತ್ತದೆ. ಜನರು ತಮ್ಮ ಅಗತ್ಯಗಳನ್ನು ಪೂರೈಸ ಲಿಕ್ಕಾಗಿ ನಾನಾ ತರದ ಅಪರಾಧಗಳನ್ನು ಮಾಡುತ್ತಾರೆ: ಕೊನೆಗೆ ಸುಲಿಗೆ ದರೋಡೆಗಳನ್ನೆಸ ಗುವಷ್ಟು ದುರ್ಗತಿಯುಂಟಾಗುತ್ತದೆ. ಸಾಮೂಹಿಕ ಕ್ರಾಂತಿಯುಂಟಾಗುತ್ತದೆ. ಧನಿಕರ ಕೊಲೆ ಯಾಗುತ್ತದೆ. ಅವರ ಮನೆಮಾರುಗಳನ್ನು ದೋಚಲಾಗುತ್ತದೆ. ಕೊನೆಗಂತೂ ಅವರು ತಮ್ಮ ಹೆಸರೂ ಸಹ ಉಳಿಯದ ರೀತಿಯಲ್ಲಿ ಅಳಿದು ಹೋಗುತ್ತಾರೆ.

## ವ್ಯಕ್ತಿಯ ಹಿತ ಸಮಾಜದ ಹಿತದಲ್ಲಿ ಅಡಗಿದೆ

ಚೆನ್ನಾಗಿ ಯೋಚಿಸಿದರೆ, ವ್ಯಕ್ತಿಯ ಏಳಿಗೆಯು ಅವನಿರುವ ಸಮಾಜದ ಏಳಿಗೆಯಲ್ಲಡಕ ವಾಗಿದೆಯೆಂಬುದು ನಿಮಗೆ ತಿಳಿಯುವುದು. ನೀವು ನಿಮ್ಮ ಸಂಪತ್ತಿನಿಂದ ನಿಮ್ಮ ಇತರ ಬಂಧು ಗಳಿಗೆ ಸಹಾಯಾರ್ಥವಾಗಿ ಕೊಟ್ಟಾಗ ಆ ಹಣವು ಸುತ್ತಾಡುತ್ತಾ ಹಲವು ವಿಧದ ಲಾಭಗಳೊಂದಿಗೆ ನಿಮ್ಮಲ್ಲಿಗೇ ಮರಳಿ ಬರುತ್ತದೆ. ನೀವು ಸಂಕುಚಿತ ದೃಷ್ಟಿಯೊಂದಿಗೆ ಅದನ್ನು ನಿಮ್ಮಲ್ಲೇ ಕೂಡಿ ಹಾಕಿಟ್ಟುಕೊಂಡರೆ ಅಥವಾ ನಿಮ್ಮ ಸ್ವಂತ ಲಾಭಕ್ಕಾಗಿ ಮಾತ್ರ ಖರ್ಚು ಮಾಡುತ್ತಿದ್ದರೆ ಕ್ರಮೇಣ ಅದು ಕ್ಷಯಿಸುತ್ತಾ ಬರುವುದು. ಉದಾ: ನೀವು ಒಬ್ಬ ಅನಾಥ ಮಗುವನ್ನು ಸಾಕಿದಿರಿ. ವಿದ್ಯೆಬುದ್ಧಿಗಳನ್ನಿತ್ತು ಅವನನ್ನು ಸಮಾಜದ ಓರ್ವ ದುಡಿಯುವ ವ್ಯಕ್ತಿಯನ್ನಾಗಿ ಮಾಡಿದಿರಿ. ಈ ಮೂಲಕ ನೀವು ಸಮಾಜದ ಆರ್ಥಿಕ ಬಲವನ್ನು ವರ್ಧಿಸಿದಂತಾಯಿತು. ನಿಮ್ಮ ಸಮಾಜದ ಆರ್ಥಿಕ ಬಲದಲ್ಲಿ ವೃದ್ಧಿಯುಂಟಾದಾಗ ನೀವೂ ಸಮಾಜದ ಒಂದಂಗವಾಗಿರುವುದರಿಂದ ನಿಮಗೂ ಅದರಿಂದ ಪಾಲು ಸಿಗುವುದು. ಅದನ್ನು ಲೆಕ್ಕ ಹಾಕಿ ಹೇಳಲು ಸಾಧ್ಯವಾಗದಿರ ಬಹುದು. ಆದರೆ ಆ ಅನಾಥ ಮಗುವನ್ನು ನಾನೇಕೆ ಸಾಕಲಿ? ಅವನ ಪೋಷಣೆಗೆ ತಕ್ಕ ವ್ಯವಸ್ಥೆಯನ್ನು ಅವನ ತಂದೆಯೇ ಮಾಡಿಡಬೇಕಿತ್ತೆಂದು ನೀವು ಸಂಕುಚಿತ ಹಾಗೂ ಸ್ವಾರ್ಥ ಮನೋವೃತ್ತಿಯಿಂದ ವರ್ತಿಸಿದರೆ ಅವನು ಅಲೆಮಾರಿಯಾಗಿ ಬೆಳೆಯುತ್ತ ನಿಷ್ಪ್ರಯೋಜಕನಾಗ ಬಹುದು. ಅವನಲ್ಲಿ ಸ್ವತಃ ದುಡಿದು ಸಮಾಜದ ಸಂಪತ್ತನ್ನು ಹೆಚ್ಚಿಸುವ ಅರ್ಹತೆಯುಂಟಾಗ ಲಾರದು. ಅವನು ದರೋಡೆಕೋರನಾಗಿ ಬೆಳೆದು ಒಂದು ದಿನ ನಿಮ್ಮ ಮನೆಗೇ ಕನ್ನ ಹಾಕಲೂಬಹುದು. ಹೀಗೆ ನೀವು ಸಮಾಜದ ಒಬ್ಬ ವ್ಯಕ್ತಿಯನ್ನು ಸುಧಾರಿಸದೆ ಅವನನ್ನು ಹಾಳಾಗಲು ಬಿಟ್ಟಾಗ ಅದರಿಂದ ಅವನ ಸ್ವಂತಕ್ಕೇ ಕೇಡಾಗುವುದು ಮಾತ್ರವಲ್ಲದೆ, ಈ ಮೂಲಕ ನೀವು ಸ್ವತಃ ನಿಮಗೂ ಹಾನಿಯನ್ನುಂಟು ಮಾಡಿಕೊಳ್ಳುವಿರೆಂಬುದು ಇದರಿಂದ ವ್ಯಕ್ತವಾಗುತ್ತದೆ. ಈ ಒಂದು ಉದಾಹರಣೆಯ ಆಧಾರದಲ್ಲಿ ನೀವು ವಿಶಾಲ ದೃಷ್ಟಿಯಿಂದ ಇನ್ನಷ್ಟು ವಿಷಯಗಳನ್ನು ಗಮನಿಸಿದಾಗ- ಸ್ವಾರ್ಥರಹಿತನಾಗಿ ಸಾಮೂಹಿಕ ಅಭಿವೃದ್ಧಿಗಾಗಿ ಖರ್ಚು ಮಾಡುವವನ ಹಣವು

ಬಾಹ್ಯ ದೃಷ್ಟಿಗೆ ಅವನ ಕಿಸೆಯಿಂದ ಖರ್ಚಾದಂತೆ ಕಂಡರೂ ವಾಸ್ತವ ದಲ್ಲಿ ಅದು ಪರೋಕ್ಷವಾಗಿ ವೃದ್ಧಿ ಹೊಂದುತ್ತ ಹೋಗುತ್ತಿರುತ್ತದೆ. ಕೊನೆಗೆ ಅದೇ ಹಣ ಅನೇಕಾನೇಕ ಲಾಭಗಳೊಂದಿಗೆ ಹೊರಟ ಕಿಸೆಗೇ ಮರಳಿ ಬರುತ್ತದೆ. ಸಂಕುಚಿತ ಹಾಗೂ ಸ್ವಾರ್ಥ ಮನೋವೃತ್ತಿಯಿಂದ ಹಣವನ್ನು ತನ್ನಲ್ಲೇ ಹಿಡಿದಿಟ್ಟುಕೊಂಡು ಸಮಾಜದ ಹಿತಕ್ಕಾಗಿ ಖರ್ಚು ಮಾಡದೆ ಇದ್ದಾತನ ಹಣವು ಬಾಹ್ಯ ನೋಟಕ್ಕೆ ಅವನಲ್ಲೇ ಸುರಕ್ಷಿತವಾಗಿ ಇಟ್ಟು ಕೊಂಡಿರುವಂತೆ ಅಥವಾ ಬಡ್ಡಿ ವಸೂಲು ಮಾಡಿ ಅದನ್ನು ಹೆಚ್ಚಿಸುತ್ತಿರುವಂತೆ ಕಂಡರೂ ವಾಸ್ತವದಲ್ಲಿ ಅವನು ತನ್ನ ಮೂರ್ಖತನದಿಂದ ಸಂಪತ್ತನ್ನು ಕ್ಷಯಿಸಿಕೊಂಡು ತನ್ನ ಕೈಯಿಂದಲೇ ತನ್ನ ವಿನಾಶವನ್ನು ಬಗೆಯುತ್ತಾನೆ. ಈ ರಹಸ್ಯವನ್ನೇ ಅಲ್ಲಾಹನು ಕುರ್‌ಆನಿನಲ್ಲಿ ಈ ರೀತಿ ವಿವರಿಸಿರುತ್ತಾನೆ:

يَمْحَقُ اللّٰهُ الرِّبٰوا وَيُرْبِي الصَّدَقٰتِ

"ಅಲ್ಲಾಹ್ ಬಡ್ಡಿಯ ವ್ಯವಹಾರವನ್ನು ಅಳಿಸಿಬಿಡುತ್ತಾನೆ ಮತ್ತು ದಾನ ಧರ್ಮಗಳನ್ನು ವೃದ್ಧಿಸುತ್ತಾನೆ." (ಅಲ್‌ಬಕರ: 276)

وَمَآ اٰتَيْتُمْ مِّنْ رِّبًا لِّيَرْبُوَا۟ فِيْٓ اَمْوَالِ النَّاسِ فَلَا يَرْبُوْا عِنْدَ اللّٰهِ ۚ

وَمَآ اٰتَيْتُمْ مِّنْ زَكٰوةٍ تُرِيْدُوْنَ وَجْهَ اللّٰهِ فَاُولٰٓئِكَ هُمُ الْمُضْعِفُوْنَ ۝

"ಜನರ ಸೊತ್ತಿನಲ್ಲಿ ಸೇರಿ ವೃದ್ಧಿಯಾಗಬೇಕೆಂದು ನೀವು ಕೊಡುವ ಬಡ್ಡಿಯು ಅಲ್ಲಾಹನ ಬಳಿ ವೃದ್ಧಿಸುವುದಿಲ್ಲ. ನೀವು ಅಲ್ಲಾಹನ ಸಂಪ್ರೀತಿ ಬಯಸಿ ಕೊಡುವ ಝಕಾತ್- ಇದನ್ನು ನೀಡುವವರೇ ವಾಸ್ತವದಲ್ಲಿ ತಮ್ಮ ಸಂಪತ್ತನ್ನು ವೃದ್ಧಿಸಿಕೊಳ್ಳುತ್ತಾರೆ."

(ಅರ್ರೂಮ್: 39)

ಆದರೆ ಈ ರಹಸ್ಯವನ್ನು ತಿಳಿಯಲಿಕ್ಕೂ ಅದರಂತೆ ಕಾರ್ಯಾಚರಣೆ ಮಾಡಲಿಕ್ಕೂ ಮಾನವನ ಸಂಕುಚಿತ ಮನೋಭಾವ ಮತ್ತು ಅಜ್ಞಾನವು ಅನುಮತಿಸುವುದಿಲ್ಲ. ಮಾನವನು ಇಂದ್ರಿಯ ಸುಖಗಳ ದಾಸ. ಅವನು ತನ್ನ ಕಿಸೆಯಲ್ಲಿರುವ ಹಣವನ್ನು ಮಾತ್ರ ನೋಡಬಲ್ಲ ಮತ್ತು ತಿಳಿಯಬಲ್ಲ. ತನ್ನ ಖಾತೆಯಲ್ಲಿದ್ದು ವೃದ್ಧಿಯಾಗುತ್ತಿರುವ ಹಣವನ್ನು ಮಾತ್ರ ಕಾಣಬಲ್ಲ. ಆದರೆ ಅವನ ಕೈಯಿಂದ ಹೊರಟು ಹೋದ ಹಣವು ಎಲ್ಲಿ, ಹೇಗೆ ಮತ್ತು ಎಷ್ಟು ವೃದ್ಧಿಸುತ್ತಾ ಇರುತ್ತದೆ ಮತ್ತು ಅದು ಎಂತಹ ಲಾಭ ಮತ್ತು ಪ್ರಯೋಜನಗಳೊಂದಿಗೆ ಯಾವಾಗ ಹಿಂದಿರುಗುತ್ತದೆ ಎಂಬುದು ಅವನಿಗೆ ಕಾಣುವುದಿಲ್ಲ. ಅವನಂತೂ ತನ್ನ ಕೈಯಿಂದ ಹೋದ ಹಣ ಶಾಶ್ವತವಾಗಿ ಹೋಗಿ ಬಿಟ್ಟಿತೆಂದೇ ತಿಳಿಯುತ್ತಾನೆ.

ಅಜ್ಞಾನದ ಈ ಗೋಡೆಯನ್ನು ತನ್ನ ವಿವೇಕ ಮತ್ತು ಸ್ವಪ್ರಯತ್ನದಿಂದ ಬೀಳಿಸಲು ಮಾನವನಿಗೆ ಈ ತನಕ ಸಾಧ್ಯವಾಗಿಲ್ಲ. ಇದು ಇಡೀ ಪ್ರಪಂಚದ ಅವಸ್ಥೆಯಾಗಿದೆ. ಒಂದು ಕಡೆ ಬಂಡವಾಳಶಾಹಿಗಳ ಜಗತ್ತಿದೆ, ಅಲ್ಲಿನ ಎಲ್ಲ ವ್ಯವಹಾರಗಳೂ ಬಡ್ಡಿಯ ಆಧಾರದಲ್ಲೇ

ನಡೆಯುತ್ತವೆ. ಆದರೆ ಅಲ್ಲಿ ಧಾರಾಳ ಸಂಪತ್ಸಮೃದ್ಧಿಯಿದ್ದರೂ ಕಷ್ಟ-ಕಾರ್ಪಣ್ಯಗಳು ದಿನೇದಿನೇ ಹೆಚ್ಚುತ್ತಲೇ ಹೋಗುತ್ತಿವೆ. ಇನ್ನೊಂದು ಕಡೆ ಹೃದಯದಲ್ಲಿ ಮತ್ಸರಾಗ್ನಿಯು ಭುಗಿಲೇಳುವ ಗುಂಪೊಂದು ತಲೆಯೆತ್ತಿ ಸಂಖ್ಯೆಯಲ್ಲಿ ಹೆಚ್ಚುತ್ತಾ ಹೋಗುತ್ತಿದೆ. ಇದು ಬಂಡವಾಳ ಶಾಹಿಗಳ ತಿಜೋರಿಗಳನ್ನು ಕೊಳ್ಳೆ ಹೊಡೆದು ಮಾನವ ನಾಗರಿಕತೆಯನ್ನೇ ಬುಡಮೇಲು ಮಾಡ ಬಯಸುತ್ತದೆ.

## ಸಂಕಷ್ಟಗಳಿಗೆ ಪರಿಹಾರ

ಈ ತೊಡಕನ್ನು ಮಹಾ ವಿವೇಕಪೂರ್ಣನೂ ಮಹಾ ಧೀಮಂತನೂ ಆಗಿರುವ ಅಲ್ಲಾಹನು ತನ್ನ ಗ್ರಂಥದಲ್ಲಿ ಬಗೆಹರಿಸಿರುತ್ತಾನೆ. ಅಲ್ಲಾಹನ ಮೇಲಿನ ವಿಶ್ವಾಸ ಮತ್ತು ಪರಲೋಕದ ಮೇಲಿನ ವಿಶ್ವಾಸವೇ ಈ ಪರಿಹಾರ. ಮಾನವನು ಅಲ್ಲಾಹನ ಮೇಲೆ ವಿಶ್ವಾಸವಿರಿಸಿ ಭೂಮಿ-ಆಕಾಶಗಳ ಅನಂತ ಭಂಡಾರದ ಮಾಲಿಕನು ಅಲ್ಲಾಹನೆಂದೂ ಮಾನವನ ಸರ್ವ ಆಗುಹೋಗುಗಳು ಅಲ್ಲಾಹನ ಅಂಕೆಯಲ್ಲೇ ಇವೆಯೆಂದೂ, ಅವನ ಬಳಿ ಒಂದೊಂದು ಕಣದ ಲೆಕ್ಕವೂ ಇದೆಯೆಂದೂ, ಮಾನವನ ಸರ್ವ ಒಳಿತು ಕೆಡುಕುಗಳ ಅಂತಿಮ ಸತ್ಫಲ - ದುಷ್ಫಲಗಳೆಲ್ಲಾ ಒಂದಿಷ್ಟೂ ಹೆಚ್ಚು ಕಡಿಮೆಯಾಗದಂತೆ ಪರದಲ್ಲಿ ಸಿಕ್ಕಲಿರುವುದೆಂದೂ ಖಾತ್ರಿಯಾಗಿ ತಿಳಿದುಕೊಂಡಾಗ ಅವನು ತನ್ನ ದೃಷ್ಟಿಯ ಮೇಲೆ ಭರವಸೆ ಇಡುವುದನ್ನು ಬಿಟ್ಟು ಅಲ್ಲಾಹನ ಮೇಲೆ ಭರವಸೆಯಿಡುತ್ತಾನೆ. ತನ್ನ ಸಂಪತ್ತನ್ನು ದೇವಮಾರ್ಗದಲ್ಲಿ ವಿನಿಯೋಗಿಸುತ್ತಾನೆ. ಅದರ ಲಾಭ ನಷ್ಟಗಳನ್ನು ಅಲ್ಲಾಹನಿಗೆ ಸಮರ್ಪಿಸುತ್ತಾನೆ. ಈ ವಿಶ್ವಾಸದೊಂದಿಗೆ ಅವನು ಖರ್ಚು ಮಾಡುವುದೆಲ್ಲಾ ಅಲ್ಲಾಹನಿಗೆ ಕೊಟ್ಟ ಹಾಗೆ. ಅದರ ಲೆಕ್ಕಾಚಾರವೂ ಅಲ್ಲಾಹನ ಖಾತೆಯಲ್ಲಿ ದಾಖಲಾಗುವುದು. ಅವನ ಉಪಕಾರಗಳು ಈ ಲೋಕದಲ್ಲಿ ಯಾರ ತಿಳುವಳಿಕೆಗೂ ಬಾರದೆ ಹೋದರೂ ಅಲ್ಲಾಹನು ನಿಶ್ಚಯವಾಗಿಯೂ ಅದನ್ನು ತಿಳಿಯುವನು. ಅದರ ಸತ್ಫಲವನ್ನು ತಾನು ನೀಡುವೆನೆಂದು ಆತನು ವಾಗ್ದಾನ ಮಾಡಿದ ಮೇಲೆ ಅದು ಖಂಡಿತವಾಗಿಯೂ ಸಿಗುವುದು. ಅದು ಪರಲೋಕದಲ್ಲಿ ಸಿಗಬಹುದು ಅಥವಾ ಇಹ-ಪರಗಳೆರಡರಲ್ಲೂ ಸಿಗಬಹುದು.



# 'ಇನ್‌ಫಾಕ್'ನ ಸಾಮಾನ್ಯ ವಿಧಿಗಳು

## ಎರಡು ಬಗೆಯ ಆದೇಶಗಳು

**ಮು**ಸ್ಲಿಮ್ ಬಂಧುಗಳೇ! ಅಲ್ಲಾಹನು ತನ್ನ ಶರೀಅತ್‌ನಲ್ಲಿ (ಧರ್ಮಶಾಸ್ತ್ರದಲ್ಲಿ) ಒಂದು ನಿಯಮವನ್ನಿರಿಸಿಕೊಂಡಿದ್ದಾನೆ. ಅದೇನೆಂದರೆ ಜನರು ತಮ್ಮ ಜೀವನದಲ್ಲಿ ಒಳ್ಳೆಯ ಕೆಲಸ ಗಳನ್ನು ಕೈಗೊಳ್ಳುವಂತೆ ಮಾಡಲಿಕ್ಕಾಗಿ ಮೊತ್ತಮೊದಲು ಸತ್ಕಾರ್ಯಗಳ ಒಂದು ಸಾರ್ವತ್ರಿಕ ಆದೇಶವನ್ನು ನೀಡಲಾಗುತ್ತದೆ. ಅನಂತರ ಆ ಸತ್ಕಾರ್ಯವನ್ನು ವಿಶಿಷ್ಟವಾಗಿ ಆಚರಿಸಲಿಕ್ಕಾಗಿ ಅದರ ವಿಶಿಷ್ಟ ರೂಪಗಳನ್ನು ನಿಶ್ಚಯಿಸಿ ಕೊಡಲಾಗುತ್ತದೆ.

## ದೇವಸ್ಮರಣೆಯ ಸಾರ್ವತ್ರಿಕ ಆದೇಶ

ಒಂದು ಉದಾಹರಣೆಯನ್ನು ನೋಡಿರಿ. ದೇವಸ್ಮರಣೆಯು ಒಂದು ಸತ್ಕಾರ್ಯ. ಮಾತ್ರವಲ್ಲ, ಅದು ಎಲ್ಲಾ ಸತ್ಕಾರ್ಯಗಳ ಮೂಲವಾಗಿದೆ. ಆದುದರಿಂದ ಅಲ್ಲಾಹನನ್ನು ಸದಾ ಸ್ಮರಿಸುತ್ತಿರಬೇಕು. ಯಾವ ಸ್ಥಿತಿಯಲ್ಲಿಯೂ ಅವನ ಸ್ಮರಣೆಯಿಂದ ವಿರಹಿತರಾಗಬಾರ ದೆಂಬುದು ಸಾಮಾನ್ಯ ವಿಧಿ-

فَاذْكُرُوا اللّٰهَ قِيٰمًا وَّقُعُوْدًا وَّعَلٰى جُنُوْبِكُمْ

"ನಿಂತಿರುವಾಗಲೂ ಕುಳಿತಿರುವಾಗಲೂ ಮಲಗಿರುವಾಗಲೂ ಎಲ್ಲ ಅವಸ್ಥೆಗಳಲ್ಲೂ ಅಲ್ಲಾಹನನ್ನು ಸ್ಮರಿಸುತ್ತಲಿರಿ."

(ಅನ್ನಿಸಾ: 103)

وَاذْكُرُوا اللّٰهَ كَثِيْرًا لَّعَلَّكُمْ تُفْلِحُوْنَ

"ಅಲ್ಲಾಹನನ್ನು ಅತಿ ಹೆಚ್ಚಾಗಿ ಸ್ಮರಿಸಿರಿ. ನಿಮಗೆ ವಿಜಯ ಪ್ರಾಪ್ತಿಯಾದೀತೆಂದು ನಿರೀಕ್ಷಿಸಬಹುದು."

(ಅಲ್ ಅನ್‌ಫಾಲ್: 45)

إِنَّ فِي خَلْقِ السَّمٰوٰتِ وَالْأَرْضِ وَاخْتِلَافِ الَّيْلِ وَالنَّهَارِ لَآيٰتٍ لِّأُولِي الْأَلْبَابِ ﴿١٩٠﴾
الَّذِينَ يَذْكُرُونَ اللّٰهَ قِيٰمًا وَقُعُودًا وَعَلٰى جُنُوبِهِمْ وَيَتَفَكَّرُونَ فِي خَلْقِ السَّمٰوٰتِ
وَالْأَرْضِ رَبَّنَا مَا خَلَقْتَ هٰذَا بَاطِلًا

"ಭೂಮಿ-ಆಕಾಶಗಳ ಸೃಷ್ಟಿಯಲ್ಲಿಯೂ ರಾತ್ರಿ ಹಗಲುಗಳು ಅನುಕ್ರಮವಾಗಿ ಬರುತ್ತಿರುವುದರಲ್ಲಿಯೂ ಬುದ್ಧಿಜೀವಿಗಳಿಗೆ ಸಾಕಷ್ಟು ನಿದರ್ಶನಗಳಿವೆ. ಅವರು ಎದ್ದಾಗಲೂ ಕುಳಿತಾಗಲೂ ಮಲಗಿದಾಗಲೂ ಎಲ್ಲ ಸ್ಥಿತಿಗಳಲ್ಲೂ ಅಲ್ಲಾಹನನ್ನು ಸ್ಮರಿಸುತ್ತಾರೆ ಮತ್ತು ಭೂಮಿ-ಆಕಾಶಗಳ ನಿರ್ಮಾಣದ ಬಗ್ಗೆ ಪರ್ಯಾಲೋಚಿಸುತ್ತಾರೆ. (ಅವರು ಪರವಶರಾಗಿ ಹೀಗೆನ್ನುತ್ತಾರೆ): ಪ್ರಭೂ, ನೀನು ಇವುಗಳನ್ನೆಲ್ಲ ವ್ಯರ್ಥ ಹಾಗೂ ಉದ್ದೇಶರಹಿತವಾಗಿ ಸೃಷ್ಟಿಸಲಿಲ್ಲ." (ಆಲಿ ಇಮ್‌ರಾನ್: 190, 191)

وَلَا تُطِعْ مَنْ أَغْفَلْنَا قَلْبَهُ عَنْ ذِكْرِنَا وَاتَّبَعَ هَوٰهُ وَكَانَ أَمْرُهُ فُرُطًا ﴿٢٨﴾

"ನಾವು ನಮ್ಮ ಸ್ಮರಣೆಯಿಂದ ಬೋಧಶೂನ್ಯವಾಗಿ ಮಾಡಿರುವಂಥವನನ್ನೂ ತನ್ನ ದೇಹೇಚ್ಛೆಗಳ ಅನುಸರಣೆಯನ್ನು ಸ್ವೀಕರಿಸಿಕೊಂಡಿರುವವನನ್ನೂ ಮಿತಿತಪ್ಪಿ ವರ್ತಿಸುವಂಥವನನ್ನೂ ಅನುಸರಿಸಬೇಡಿರಿ." (ಅಲ್‌ಕಹ್ಫ್: 28)

ಕುರ್‌ಆನಿನ ಇಂತಹ ಅನೇಕ ಆಯತ್(ವಾಕ್ಯ)ಗಳಲ್ಲಿ ಸದಾ ಕಾಲವೂ ಎಲ್ಲಾ ಸ್ಥಿತಿಯಲ್ಲೂ ಅಲ್ಲಾಹನ ಸ್ಮರಣೆಯನ್ನು ಮನದಲ್ಲಿರಿಸಿಕೊಳ್ಳಬೇಕೆಂಬ ಆಜ್ಞೆ ನೀಡಲಾಗಿದೆ. ಏಕೆಂದರೆ ದೇವ ಸ್ಮರಣೆಯು ಮಾತ್ರ ಮಾನವನ ವ್ಯವಹಾರಗಳನ್ನು ಸರಿಯಾಗಿಸಬಲ್ಲುದು ಮತ್ತು ಅವನನ್ನು ನೇರ ಮಾರ್ಗದಲ್ಲಿರಿಸಬಲ್ಲುದು. ಮಾನವನು ದೇವನ ಸ್ಮರಣೆಯಿಂದ ವಿರಹಿತನಾದನೆಂದರೆ ವಿಷಯಾಸಕ್ತಿ ಮತ್ತು ಶೈತಾನನ ಮಿಥ್ಯ ಭ್ರಮೆಗಳು ಅವನನ್ನು ಅಧೀನಗೊಳಿಸುತ್ತವೆ. ಇದರ ಪರಿಣಾಮವಾಗಿ ಅವನು ಸನ್ಮಾರ್ಗದಿಂದ ವ್ಯತಿಚಲಿಸಿ ತನ್ನ ಜೀವನದ ವ್ಯವಹಾರಗಳಲ್ಲಿ ಮಿತಿಮೀರಿ ವರ್ತಿಸುತ್ತಾನೆ.

## ದೇವಸ್ಮರಣೆಯ ವಿಶೇಷ ಆದೇಶ

ಇದು ಸಾಮಾನ್ಯ ವಿಧಿ. ಇನ್ನು ಈ ದೇವ ಸ್ಮರಣೆಗಾಗಿ ಒಂದು ನಿರ್ದಿಷ್ಟ ರೂಪವನ್ನು ನಿಶ್ಚಯಿಸಲಾಗಿದೆ. ಅದುವೇ ನಮಾಝ್. ನಮಾಝಿನಲ್ಲೂ ಐದು ಹೊತ್ತುಗಳಲ್ಲಿ ಕೆಲವು ರಕಅತ್‌ಗಳನ್ನು ಕಡ್ಡಾಯಗೊಳಿಸಲಾಗಿದೆ. ಅದಕ್ಕಾಗಿ ಒಮ್ಮೆಗೆ 8-10 ನಿಮಿಷಗಳಿಗಿಂತ ಹೆಚ್ಚು ಕಾಲ ವ್ಯಯವಾಗುವುದಿಲ್ಲ. ಹೀಗೆ ಬೇರೆಬೇರೆ ವೇಳೆಗಳಲ್ಲಿ ಕೆಲವು ನಿಮಿಷಗಳ ನಮಾಝ್ ಕಡ್ಡಾಯಗೊಳಿಸಿದುದರ ಉದ್ದೇಶವು ಅಷ್ಟು ಹೊತ್ತು ಮಾತ್ರ ದೇವಸ್ಮರಣೆ ಮಾಡಿ ಉಳಿದ

ಸಮಯ ಅವನನ್ನು ಮರೆತುಬಿಡಬೇಕೆಂದಲ್ಲ. ನಿಜವಾಗಿ ಅದರ ಉದ್ದೇಶವು ಕನಿಷ್ಠಪಕ್ಷ ಅಷ್ಟು ಕಾಲ ನೀವು ಸಂಪೂರ್ಣವಾಗಿ ಅವನ ಸ್ಮರಣೆಯಲ್ಲೇ ಇರಬೇಕೆಂದೂ, ಅನಂತರ ನಿಮ್ಮ ಕೆಲಸ ಕಾರ್ಯಗಳನ್ನು ಮಾಡಿಕೊಂಡಿರುತ್ತಾ ಅವನನ್ನು ಸ್ಮರಿಸುತ್ತಿರಬೇಕೆಂದೂ ಆಗಿದೆ.

## ದಾನದ ಸಾರ್ವತ್ರಿಕ ಆದೇಶ

ಝಕಾತಿನ ವಿಷಯದಲ್ಲಿಯೂ ಹೀಗೆಯೇ. ಇಲ್ಲೂ ಒಂದು ಸಾಮಾನ್ಯ ವಿಧಿ ಇದೆ. ಇನ್ನೊಂದು ನಿರ್ದಿಷ್ಟ ವಿಧಿ ಇದೆ. ಒಂದೆಡೆ ಜಿಪುಣತನ ಮತ್ತು ಸಂಕುಚಿತ ಮನೋವೃತ್ತಿಗಳು ಕೆಡುಕು ಮತ್ತು ಪಾಪಗಳ ಮೂಲವಾಗಿರುವುದರಿಂದ ಅವುಗಳಿಂದ ದೂರವಿರಬೇಕೆಂದು ಆಜ್ಞಾಪಿಸಲಾಗಿದೆ. ನಿಮ್ಮ ನೀತಿಯಲ್ಲಿ ಅಲ್ಲಾಹನ ವರ್ಣವಿರಲಿ. ಅಲ್ಲಾಹನಿಗೆ ಯಾರಿಗೂ ಏನನ್ನೂ ನೀಡಬೇಕೆಂಬ ಬಾಧ್ಯತೆಯಾಗಲೀ, ಕರ್ತವ್ಯವಾಗಲಿ ಇಲ್ಲವಾದರೂ; ಜನರು ಹಕ್ಕಿನ ರೂಪದಲ್ಲಿ ಅವನಿಂದ ಏನನ್ನೂ ಕೇಳುವಂತಿಲ್ಲವಾದರೂ ಆತನು ತನ್ನ ಸೃಷ್ಟಿಗೆ ತನ್ನ ಅನಂತ ಅನುಗ್ರಹಗಳ ಪ್ರವಾಹವನ್ನೇ ಹರಿಸುತ್ತಿರುತ್ತಾನೆ. ನೀವು ದೇವ ಮಾರ್ಗದಲ್ಲಿ ಖರ್ಚು ಮಾಡಲು ಸಾಧ್ಯವಿರುವಷ್ಟನ್ನು ಖರ್ಚು ಮಾಡಿರಿ. ನಿಮ್ಮ ಅವಶ್ಯಕತೆಗಳಿಂದ ಸಾಧ್ಯವಿದ್ದಷ್ಟನ್ನು ಉಳಿಸಿಟ್ಟು, ಅದರಿಂದ ಇತರ ಬಡಜೀವಿಗಳ ಅವಶ್ಯಕತೆಗಳನ್ನು ಪೂರ್ತಿಗೊಳಿಸಿರಿ. ಧರ್ಮ ಸೇವಾ ಕಾರ್ಯ ಗಳಿಗಾಗಿಯೂ ಅಲ್ಲಾಹನ ನಾಮವನ್ನು ಉನ್ನತಗೊಳಿಸಲಿಕ್ಕಾಗಿಯೂ ತನು-ಮನ-ಧನಗಳನ್ನು ಸವೆಸಲು ಹಿಂಜರಿಯಬೇಡಿರಿ. ನೀವು ಅಲ್ಲಾಹನನ್ನು ಪ್ರೀತಿಸುತ್ತೀರಾದರೆ ಧನಮೋಹವನ್ನು ಅಲ್ಲಾಹನ ಪ್ರೇಮಕ್ಕಾಗಿ ತ್ಯಾಗ ಮಾಡಿರಿ. ಇವೆಲ್ಲಾ ಸಾಮಾನ್ಯ ವಿಧಿಗಳು.

## ದಾನದ ನಿರ್ದಿಷ್ಟ ಆದೇಶ

ಅದೇ ರೀತಿ ನಿಮ್ಮಲ್ಲಿ ಇಂತಿಷ್ಟು ಸಂಪತ್ತು ಇದ್ದರೆ ಅದರಿಂದ ಕನಿಷ್ಠಪಕ್ಷ ಇಷ್ಟನ್ನು ದೇವಮಾರ್ಗದಲ್ಲಿ ಕಡ್ಡಾಯವಾಗಿ ವ್ಯಯಿಸಬೇಕು. ನಿಮ್ಮ ಹೊಲಗಳಿಂದ ಇಷ್ಟು ಉತ್ಪತ್ತಿ ದೊರೆತರೆ ಇಂತಿಷ್ಟು ಪಾಲನ್ನು ಕಡ್ಡಾಯವಾಗಿ ಅಲ್ಲಾಹನಿಗೆ ಅರ್ಪಿಸಬೇಕೆಂಬುದು ನಿರ್ದಿಷ್ಟ ಆದೇಶ. ಕೆಲವು ರಕಅತ್ ನಮಾಝುನ್ನು ಮಾತ್ರ ಕಡ್ಡಾಯಗೊಳಿಸಿರುವ ಉದ್ದೇಶವು ಈ ರಕಅತ್‌ಗಳನ್ನು ನೆರವೇರಿಸುತ್ತಿರುವಾಗ ಮಾತ್ರ ದೇವಸ್ಮರಣೆ ಮಾಡಬೇಕೆಂದೂ, ಉಳಿದ ಸಮಯದಲ್ಲಿ ಮರೆತುಬಿಡಬೇಕೆಂದೂ ಅಲ್ಲವಷ್ಟೆ. ಅದೇ ರೀತಿಯಲ್ಲಿ ಸಂಪತ್ತಿನ ಒಂದು ಕಿಂಚಿತ್ ಭಾಗವನ್ನು ದೇವಮಾರ್ಗದಲ್ಲಿ ಕಡ್ಡಾಯವಾಗಿ ವ್ಯಯಿಸಬೇಕೆಂಬ ಆಜ್ಞೆಯ ಅರ್ಥ ಕೂಡಾ ಇಂತಿಷ್ಟು ಸಂಪತ್ತುಳ್ಳವನು ಮಾತ್ರ ದೇವ ಮಾರ್ಗದಲ್ಲಿ ಖರ್ಚು ಮಾಡಬೇಕೆಂದಾಗಲಿ, ಅಷ್ಟು ಸಂಪತ್ತಿಲ್ಲದವರು ಕೈಕಟ್ಟಿ ಕುಳಿತಿರಬೇಕೆಂದಾಗಲಿ ಅಲ್ಲ. ಧನಿಕರು ತಮ್ಮ ಮೇಲೆ ಕಡ್ಡಾಯವಾಗಿರುವಷ್ಟು ಮಾತ್ರ ಝಕಾತನ್ನು ದೇವ ಮಾರ್ಗದಲ್ಲಿ ವಿನಿಯೋಗಿಸಬೇಕೆಂದೂ, ಅನಂತರ ಯಾರಾದರೂ ನಿರ್ಗತಿಕನು ಬಂದರೆ ಅವನನ್ನು ಹಿಂದಕ್ಕಟ್ಟಬೇಕೆಂದೂ ಅಥವಾ ಧಾರ್ಮಿಕ ಸೇವಾ ಕಾರ್ಯಗಳಲ್ಲಿ ವ್ಯಯಿಸುವ ಸಂದರ್ಭ ಬಂದಾಗ, ನಾವು ಝಕಾತ್

ಕೊಟ್ಟಾಗಿದೆ, ಇನ್ನು ನಮ್ಮಿಂದ ಒಂದು ಚಿಕ್ಕಾಸನ್ನೂ ಯಾರೂ ನಿರೀಕ್ಷಿಸಬಾರದೆಂದು ಹೇಳಬೇಕೆಂದೂ ಇದರ ಅರ್ಥವಲ್ಲ. ಝಕಾತನ್ನು ಕಡ್ಡಾಯಗೊಳಿಸಿರುವುದರ ಅರ್ಥ ಖಂಡಿತ ಇದಲ್ಲ. ನಿಜವಾಗಿ ಇದರ ಅರ್ಥ ಕನಿಷ್ಠಪಕ್ಷ ಇಷ್ಟಂಶ ಹಣವನ್ನು ಒಬ್ಬ ಧನಿಕನು ದೇವಮಾರ್ಗದಲ್ಲಿ ಕಡ್ಡಾಯವಾಗಿ ಕೊಡಲೇಬೇಕು ಮತ್ತು ಅದಕ್ಕಿಂತ ಹೆಚ್ಚು ತನಗೆ ಸಾಧ್ಯವಿದ್ದಷ್ಟನ್ನು ಖರ್ಚು ಮಾಡುತ್ತಿರಬೇಕು ಎಂದಾಗಿದೆ.

## ದಾನದ ಸಾರ್ವತ್ರಿಕ ಆದೇಶದ ಸಂಕ್ಷಿಪ್ತ ವಿವರ

ನಾನೀಗ ಮೊತ್ತಮೊದಲು ಝಕಾತಿನ ಸಾರ್ವತ್ರಿಕ ಆದೇಶದ ಕುರಿತು ಸಂಕ್ಷಿಪ್ತವಾಗಿ ಕೆಲವು ವಿವರಣೆಗಳನ್ನು ಕೊಟ್ಟು ಅನಂತರದ ಉಪನ್ಯಾಸದಲ್ಲಿ ಅದರ ನಿರ್ದಿಷ್ಟ ವಿಧಿಯನ್ನು ವಿವರಿಸುವೆನು.

ಕುರ್‌ಆನಿನ ಒಂದು ದೊಡ್ಡ ವೈಶಿಷ್ಟ್ಯವೇನೆಂದರೆ, ಅದು ಯಾವುದಾದರೊಂದು ಆಜ್ಞೆ ನೀಡುವಾಗ ಆ ಆಜ್ಞೆಯನ್ನು ಯಾಕೆ ನೀಡಲಾಗಿದೆ? ಅದರಿಂದೇನು ಪ್ರಯೋಜನ? ಎಂಬ ವಿಷಯ ಆಜ್ಞಾಪಾಲಕನಿಗೆ ಚೆನ್ನಾಗಿ ಸ್ಪಷ್ಟವಾಗಲಿಕ್ಕಾಗಿ ಆ ಆಜ್ಞೆಯ ಉದ್ದೇಶವನ್ನೂ ಔಚಿತ್ಯವನ್ನೂ ಪ್ರಯೋಜನಗಳನ್ನೂ ವಿವರಿಸುತ್ತದೆ. ಕುರ್‌ಆನನ್ನು ತೆರೆದ ಕೂಡಲೇ ಮೊದಲಾಗಿ ಕಣ್ಣಿಗೆ ಬೀಳುವ ಸೂಕ್ತ ಹೀಗಿದೆ:

## ಸತ್ಪಥದಲ್ಲಿ ನಡೆಯಲು ಬೇಕಾದ ಮೂರು ಶರತ್ತುಗಳು

ذٰلِكَ الْكِتٰبُ لَا رَيْبَ ۛ فِيْهِ ۛ هُدًى لِّلْمُتَّقِيْنَ ۝٢ الَّذِيْنَ يُؤْمِنُوْنَ بِالْغَيْبِ وَيُقِيْمُوْنَ
الصَّلٰوةَ وَمِمَّا رَزَقْنٰهُمْ يُنْفِقُوْنَ ۝٣

"ಈ ಕುರ್‌ಆನ್ ಅಲ್ಲಾಹನ ಗ್ರಂಥ. ಸಂದೇಹಾತೀತವಿದು. ಇದು ಪರೋಕ್ಷದ ಮೇಲೆ ವಿಶ್ವಾಸವಿಡುವ, ನಮಾಝನ್ನು ಸಂಸ್ಥಾಪಿಸುವ ಮತ್ತು ನಾವು ನೀಡಿದ ಜೀವನಾಧಾರಗಳಿಂದ ಖರ್ಚು ಮಾಡುವ ಮುತ್ತಕೀ(ಧರ್ಮನಿಷ್ಠ)ಗಳಿಗೆ ನೇರ ಮಾರ್ಗವನ್ನು ತೋರಿಸಿಕೊಡುತ್ತದೆ."

(ಅಲ್‌ಬಕರಃ 2, 3)

ಇಹಜೀವನದಲ್ಲಿ ನೇರ ಮಾರ್ಗದಲ್ಲಿ ನಡೆಯಲು ಮೂರು ಅನಿವಾರ್ಯ ಶರತ್ತುಗಳಿವೆಯೆಂಬ ಮೂಲ ತತ್ವವನ್ನು ಈ ಸೂಕ್ತದಲ್ಲಿ ತಿಳಿಸಲಾಗಿದೆ: "1] ಪರೋಕ್ಷದ ಮೇಲೆ ವಿಶ್ವಾಸ.* 2] ನಮಾಝನ್ನು ಸಂಸ್ಥಾಪಿಸುವುದು. 3] ಅಲ್ಲಾಹನು ನೀಡಿದ ಜೀವನಾಧಾರಗಳಿಂದ ಅವನ ಮಾರ್ಗದಲ್ಲಿ ವ್ಯಯಿಸುವುದು."

*ಅಲ್ಲಾಹ್, ಪ್ರವಾದಿ ಮತ್ತು ಪರಲೋಕ ಇತ್ಯಾದಿಗಳ ಮೇಲಿನ ವಿಶ್ವಾಸವೂ ಇದರಲ್ಲೇ ಒಳಗೊಂಡಿವೆ.

ಇನ್ನೊಂದು ಕಡೆ ಹೀಗಿದೆ:

لَنْ تَنَالُوا الْبِرَّ حَتّٰى تُنْفِقُوْا مِمَّا تُحِبُّوْنَ ۗ

"ನೀವು ನಿಮಗೆ ಬಹಳ ಪ್ರಿಯವಾಗಿರುವ ವಸ್ತುಗಳನ್ನು (ಅಲ್ಲಾಹನ ಮಾರ್ಗದಲ್ಲಿ) ವ್ಯಯಿಸುವ ತನಕವೂ ಪುಣ್ಯದ ಮಟ್ಟವನ್ನು ತಲಪಲಾರಿರಿ." (ಆಲಿ ಇಮ್‌ರಾನ್: 92)

ಅನಂತರ ಹೀಗೆ ಹೇಳಿದೆ:

اَلشَّيْطٰنُ يَعِدُكُمُ الْفَقْرَ وَيَاْمُرُكُمْ بِالْفَحْشَاۗءِ ۚ

"(ನೀವು ಖರ್ಚು ಮಾಡಿದರೆ ನಿರ್ಗತಿಕರಾಗಿ ಬಿಡುವಿರೆಂದು) ಶೈತಾನನು ನಿಮ್ಮನ್ನು ದಾರಿದ್ರ್ಯದ ಬಗ್ಗೆ ಹೆದರಿಸುತ್ತಾನೆ. ಅವನು ನಿಮಗೆ ಲಜ್ಜಾಸ್ಪದವಾದ ಜಿಪುಣತೆಯನ್ನು ಬೋಧಿಸುತ್ತಾನೆ." (ಅಲ್‌ಬಕರಃ: 268)

ಬೇರೆ ಒಂದೆಡೆ ಹೀಗೆ ಹೇಳಲಾಗಿದೆ:

وَاَنْفِقُوْا فِيْ سَبِيْلِ اللّٰهِ وَلَا تُلْقُوْا بِاَيْدِيْكُمْ اِلَى التَّهْلُكَةِ ۛ

"ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡಿರಿ. ನಿಮ್ಮ ಕೈಗಳಿಂದಲೇ ನೀವು ನಿಮ್ಮ ವಿನಾಶವನ್ನು ಮಾಡಿಕೊಳ್ಳಬೇಡಿರಿ." (ದೇವ ಮಾರ್ಗದಲ್ಲಿ ಖರ್ಚು ಮಾಡದಿರುವುದೇ ವಿನಾಶ) (ಅಲ್‌ಬಕರಃ: 195)

ಕೊನೆಗೆ ಹೀಗೆ ಹೇಳಿದೆ:

وَمَنْ يُّوْقَ شُحَّ نَفْسِهٖ فَاُولٰۗىِٕكَ هُمُ الْمُفْلِحُوْنَ ۝

"ವಾಸ್ತವದಲ್ಲಿ ಯಾರು ತಮ್ಮ ಮನಸ್ಸಿನ ಸಂಕುಚಿತತೆಯಿಂದ ರಕ್ಷಿಸಲ್ಪಟ್ಟರೋ ಅವರೇ ವಿಜಯಿಗಳು." (ಅಲ್‌ಹಶ್ರ್: 9)

## ಎರಡು ಬಗೆಯ ಜೀವನ ವಿಧಾನಗಳು

ಈ ಸೂಕ್ತಗಳಿಂದ ತಿಳಿದು ಬರುವಂತೆ ಈ ಲೋಕದಲ್ಲಿ ಮನುಷ್ಯನಿಗೆ ಜೀವನ ನಡೆಸುವ ಎರಡು ಮಾರ್ಗಗಳಿವೆ. ಒಂದನೆಯದು- ಒಳಿತು, ವಿಜಯ ಹಾಗೂ ಕೃತಾರ್ಥತೆಗಳನ್ನು ನೀಡುವ ದೇವಮಾರ್ಗ. ಈ ಮಾರ್ಗದಲ್ಲಿ ನಡೆಯಲು ಪಾಲಿಸಬೇಕಾದ ನಿಯಮವೇನೆಂದರೆ ಮನುಷ್ಯನ ಹೃದಯ ವಿಶಾಲವಾಗಿದ್ದು ಅಲ್ಲಾಹನು ತನಗೆ ಕೊಟ್ಟದ್ದು ಸ್ವಲ್ಪವಿರಲಿ ಅಥವಾ ಹೆಚ್ಚಿರಲಿ ಅದರಿಂದ ಅವನು ತನ್ನ ಸ್ವಂತ ಅವಶ್ಯಕತೆಗಳನ್ನು ಪೂರೈಸಿಕೊಂಡು ತನ್ನ ಸೋದರರಿಗೂ ಸಹಾಯ ಮಾಡಬೇಕು. ಅಲ್ಲಾಹನ ನಾಮೋತ್ತುಂಗಕ್ಕಾಗಿಯೂ ವ್ಯಯಿಸುತ್ತಿರಬೇಕು. ಇನ್ನೊಂದು ಶೈತಾನನ ಮಾರ್ಗ- ಅದರಲ್ಲಿ

ಪ್ರತ್ಯಕ್ಷವಾಗಿ ಲಾಭವೇ ತೋರುತ್ತದೆ. ಆದರೆ ವಾಸ್ತವದಲ್ಲಿ ಕೇಡು ಮತ್ತು ವಿನಾಶಗಳ ಹೊರತು ಇನ್ನೇನೂ ಇಲ್ಲ. ಧನ ಶೇಖರಣೆ, ಹಣಕ್ಕಾಗಿ ಜೀವ ಬಿಡುವುದು, ಜಿಪುಣತೆಯಿಂದಾಗಿ ಖರ್ಚನ್ನೇ ಮಾಡದಿರುವುದು, ಒಂದು ವೇಳೆ ಖರ್ಚು ಮಾಡುವುದಿದ್ದರೂ ತನ್ನ ದೇಹೇಚ್ಛೆಗಳಿಗಾಗಿ ಮಾತ್ರ ಖರ್ಚು ಮಾಡುವುದು, ಇವೇ ಈ ಮಾರ್ಗದ ನಿಯಮಗಳು.

## ದೇವ ಮಾರ್ಗದಲ್ಲಿ ವ್ಯಯಿಸುವ ವಿಧಾನಗಳು

ದೇವಮಾರ್ಗದಲ್ಲಿ ನಡೆಯುವವರಿಗೆ ದೇವಮಾರ್ಗದಲ್ಲಿ ವ್ಯಯಿಸುವ ಯಾವ ವಿಧಾನಗಳನ್ನು ತೋರಿಸಿಕೊಡಲಾಗಿದೆಯೆಂಬುದನ್ನು ಈಗ ನಾನು ಕ್ರಮಾನುಗತವಾಗಿ ವಿವರಿಸುವೆನು.

### 1. ಕೇವಲ ದೇವ ಸಂಪ್ರೀತಿಗಾಗಿ ಕೊಡಬೇಕು

ಖರ್ಚು ಮಾಡುವ ಉದ್ದೇಶವು ದೇವಸಂಪ್ರೀತಿ ಮತ್ತು ದೇವಸಂತುಷ್ಟಿ ಮಾತ್ರವಾಗಿರಬೇಕು. ಇತರರ ಮೇಲೆ ಉಪಕಾರಭಾರವನ್ನಿರಿಸಲಿಕ್ಕಾಗಿ ಅಥವಾ ಲೌಕಿಕ ಕೀರ್ತಿಗಾಗಿ ವ್ಯಯಿಸಬಾರದು.

وَمَا تُنْفِقُوْنَ اِلَّا ابْتِغَآءَ وَجْهِ اللّٰهِ ۭ

"ನೀವು ದಾನಧರ್ಮಗಳಲ್ಲಿ ಖರ್ಚು ಮಾಡುವುದೆಲ್ಲಾ ನಿಮ್ಮ ಸ್ವಂತದ ಒಳಿತಿಗಾಗಿ ಮಾತ್ರ. ಅಲ್ಲಾಹನ ಸಂಪ್ರೀತಿಯನ್ನು ಬಯಸಿಯೇ ನೀವು ಖರ್ಚು ಮಾಡುತ್ತೀರಷ್ಟೇ."

(ಅಲ್‌ಬಕರಃ 272)

يٰٓاَيُّهَا الَّذِيْنَ اٰمَنُوْا لَا تُبْطِلُوْا صَدَقٰتِكُمْ بِالْمَنِّ وَالْاَذٰى ۙ كَالَّذِيْ يُنْفِقُ مَالَهٗ رِئَاۗءَ النَّاسِ وَلَا يُؤْمِنُ بِاللّٰهِ وَالْيَوْمِ الْاٰخِرِ ۭ فَمَثَلُهٗ كَمَثَلِ صَفْوَانٍ عَلَيْهِ تُرَابٌ فَاَصَابَهٗ وَابِلٌ فَتَرَكَهٗ صَلْدًا ۭ

"ಸತ್ಯವಿಶ್ವಾಸಿಗಳೇ! ತನ್ನ ಸಂಪತ್ತನ್ನು ಆಡಂಬರಕ್ಕಾಗಿ ಖರ್ಚು ಮಾಡುವವನಂತೆ ಹಾಗೂ ಅಲ್ಲಾಹ್ ಮತ್ತು ಆಖಿರತ್‌ನಲ್ಲಿ(ಅಂತಿಮ ದಿವಸ) ವಿಶ್ವಾಸವಿರಿಸದವನಂತೆ ನೀವು ಉಪಕಾರಭಾರವಿರಿಸಿಯೂ ನೋಯಿಸಿಯೂ ನಿಮ್ಮ ದಾನ ಧರ್ಮಗಳನ್ನು ನಿಷ್ಫಲಗೊಳಿಸಬೇಡಿರಿ. ಅಂಥವನ ಖರ್ಚಿನ ಉಪಮೆ - ಮಣ್ಣಿನ ಮೇಲ್ಪದರವಿರುವ ಒಂದು ಬಂಡೆಯಿದ್ದು ಜೋರಾಗಿ ಮಳೆ ಸುರಿದಾಗ ಮಣ್ಣೆಲ್ಲಾ ಕೊಚ್ಚಿಹೋಗಿ ಕೇವಲ ಬರಡು ಬಂಡೆ ಮಾತ್ರ ಉಳಿದಿರುವಂತಿದೆ."

(ಅಲ್‌ಬಕರಃ 264)

2. ಋಣಭಾರವಿರಿಸಬಾರದು

ಯಾರಿಗಾದರೂ ಹಣ ಸಹಾಯ ಮಾಡಿ, ಉಣಿಸಿ ಅಥವಾ ಬಟ್ಟೆಯುಡಿಸಿ ಋಣಭಾರವನ್ನಿರಿಸಬಾರದು ಮತ್ತು ಅವನ ಮನ ನೋಯಿಸುವಂತಹ ಯಾವುದೇ ಕೆಲಸ ಮಾಡಬಾರದು-

اَلَّذِيْنَ يُنْفِقُوْنَ اَمْوَالَهُمْ فِيْ سَبِيْلِ اللّٰهِ ثُمَّ لَا يُتْبِعُوْنَ مَآ اَنْفَقُوْا مَنًّا وَّلَآ اَذًى ۙ لَّهُمْ اَجْرُهُمْ عِنْدَ رَبِّهِمْ ۚ وَلَا خَوْفٌ عَلَيْهِمْ وَلَا هُمْ يَحْزَنُوْنَ ﴿٢٦٢﴾

قَوْلٌ مَّعْرُوْفٌ وَّمَغْفِرَةٌ خَيْرٌ مِّنْ صَدَقَةٍ يَّتْبَعُهَآ اَذًى ۗ

"ಅಲ್ಲಾಹನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ಖರ್ಚು ಮಾಡುವವರ, ಖರ್ಚು ಮಾಡಿದುದನ್ನು ಆಡಿಕೊಳ್ಳದವರ ಮತ್ತು ಪರಪೀಡನೆಗೈಯ್ಯದವರ ಪ್ರತಿಫಲವು ಅವರ ಪ್ರಭುವಿನ ಬಳಿ ಇದೆ. ಅವರಿಗೆ ಯಾವತ್ತೂ ಭಯ ಮತ್ತು ವ್ಯಥೆಯ ಸಂಭವವಿಲ್ಲ. ಒಂದು ಸವಿನುಡಿ ಮತ್ತು ಕ್ಷಮಾಗುಣವು ಮನ ನೋಯಿಸುವ ದಾನಕ್ಕಿಂತ ಉತ್ತಮ."

(ಅಲ್‌ಬಕರಃ: 262,263)

3. ಉತ್ತಮವಾದುದನ್ನೇ ಕೊಡಬೇಕು

ದೇವ ಮಾರ್ಗದಲ್ಲಿ ಅತ್ಯುತ್ತಮವಾದುದನ್ನು ಕೊಡಬೇಕು. ಕೆಟ್ಟದ್ದನ್ನು ಆಯ್ದು ಕೊಡಬಾರದು. ದರಿದ್ರನಿಗೆ ಕೊಡಲು ಹರಕು ಬಟ್ಟೆಗಳನ್ನೂ ಬಡವನಿಗೆ ಉಣಿಸಲು ಕೀಳು ತರಗತಿಯ ಆಹಾರವನ್ನೂ ಆಯ್ದಿಡುವವರು ಅಲ್ಲಾಹನಿಂದಲೂ ಇದೇ ತರದ ಕೆಳಮಟ್ಟದ ಪ್ರತಿಫಲವನ್ನು ನಿರೀಕ್ಷಿಸಬೇಕು-

يٰٓاَيُّهَا الَّذِيْنَ اٰمَنُوْٓا اَنْفِقُوْا مِنْ طَيِّبٰتِ مَا كَسَبْتُمْ وَمِمَّآ اَخْرَجْنَا لَكُمْ مِّنَ الْاَرْضِ ۖ وَلَا تَيَمَّمُوا الْخَبِيْثَ مِنْهُ تُنْفِقُوْنَ

"ಸತ್ಯವಿಶ್ವಾಸಿಗಳೇ! ನೀವು ಸಂಪಾದಿಸಿದ ಸಂಪತ್ತಿನಿಂದ ಮತ್ತು ನಾವು ನಿಮಗಾಗಿ ಭೂಮಿಯಿಂದ ಉತ್ಪಾದಿಸಿದವುಗಳಿಂದ ಉತ್ತಮವಾದವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡಿರಿ. ಅವನ ಮಾರ್ಗದಲ್ಲಿ ಕೊಡಲು ಅತ್ಯಂತ ಕೆಟ್ಟ ವಸ್ತುವನ್ನು ವಿಂಗಡಿಸಬಾರದು."

(ಅಲ್‌ಬಕರಃ: 267)

4. ಆದಷ್ಟು ಗುಪ್ತವಾಗಿ ಕೊಡಬೇಕು

ತೋರಿಕೆ ಮತ್ತು ಆಡಂಬರಗಳು ದಾನದೊಂದಿಗೆ ಬೆರೆತುಹೋಗದಂತಾಗಲು ದಾನವನ್ನು ಸಾಧ್ಯವಾದಷ್ಟು ರಹಸ್ಯವಾಗಿ ಕೊಡಿರಿ. ಬಹಿರಂಗವಾಗಿ ಕೊಡುವುದರಿಂದೇನೂ ಅಡ್ಡಿಯಿಲ್ಲವಾದರೂ ಮುಚ್ಚಿ-ಮರೆಸಿ ಕೊಡುವುದೇ ಅತ್ಯುತ್ತಮ-

إِنْ تُبْدُوا الصَّدَقَاتِ فَنِعِمَّا هِيَ ۖ وَإِنْ تُخْفُوهَا وَتُؤْتُوهَا الْفُقَرَاءَ فَهُوَ

خَيْرٌ لَكُمْ ۚ وَيُكَفِّرُ عَنْكُمْ مِنْ سَيِّئَاتِكُمْ ۗ

"ನಿಮ್ಮ ದಾನ ಧರ್ಮಗಳನ್ನು ಬಹಿರಂಗವಾಗಿ ಕೊಡುವುದಿದ್ದರೂ ಒಳ್ಳೆಯದೇ. ಆದರೆ ರಹಸ್ಯವಾಗಿ ಬಡಬಗ್ಗರಿಗೆ ಕೊಡುವುದು ಹೆಚ್ಚು ಉತ್ತಮ. ಈ ಕ್ರಮದಿಂದಾಗಿ ನಿಮ್ಮ ಹಲವಾರು ದೋಷಗಳು ಪರಿಹಾರಗೊಳ್ಳುವುವು."

(ಅಲ್‌ಬಕರ:: 271)

### 5. ಮೂರ್ಖರಿಗೆ ಅಗತ್ಯಕ್ಕಿಂತ ಹೆಚ್ಚು ಕೊಡಬಾರದು

ಮೂರ್ಖರಿಗೂ ತಿಳಿಗೇಡಿಗಳಿಗೂ ಅವರ ಅವಶ್ಯಕತೆಗಿಂತ ಹೆಚ್ಚಿಗೆ ಕೊಡಬಾರದು. ಹಾಗೆ ಕೊಟ್ಟರೆ ಅವರು ಹಾಳಾಗುವ ಮತ್ತು ದುರಭ್ಯಾಸಗಳಿಗೆ ಬಲಿ ಬೀಳುವ ಸಾಧ್ಯತೆ ಇದೆ. ಅಂಥವರಿಗೆ ಅವರ ಸ್ಥಿತಿಗನುಸಾರ ಕೊಡಬೇಕು. ಹೊಟ್ಟೆಗೆ ಅನ್ನ, ಉಡಲು ಬಟ್ಟೆ ಇವುಗಳು ಪ್ರತಿಯೊಬ್ಬ ನೀಚನಿಗೂ ದುಷ್ಟನಿಗೂ ಸಿಗಲೇಬೇಕೆಂದು ಅಲ್ಲಾಹನ ಇಚ್ಛೆ. ಆದರೆ ಮದ್ಯಪಾನಿಗಳು, ಅಫೀಮು - ಗಾಂಜಾಗಳ ಸೇವನೆ ಮಾಡುವವರು ಮತ್ತು ಜೂಜುಕೋರರಂತಹ ಲಫಂಗರಿಗೆ ಎಂದೆಂದಿಗೂ ಹಣ ಕೊಡಬಾರದು-

وَلَا تُؤْتُوا السُّفَهَاءَ أَمْوَالَكُمُ الَّتِي جَعَلَ اللَّهُ لَكُمْ قِيَامًا وَارْزُقُوهُمْ

فِيهَا وَاكْسُوهُمْ

"ಅಲ್ಲಾಹನು ನಿಮಗೆ ಜೀವನ ಸಾಧನವನ್ನಾಗಿ ನಿಶ್ಚಯಿಸಿರುವ ಸಂಪತ್ತನ್ನು ತಿಳಿಗೇಡಿಗಳ ವಶಕ್ಕೆ ಒಪ್ಪಿಸಬೇಡಿರಿ. ಆದರೆ ಅವರಿಗೆ ಉಣ್ಣಲಿಕ್ಕೂ ಉಡಲಿಕ್ಕೂ ಕೊಡಿರಿ ಮತ್ತು ಅವರಿಗೆ ಸದ್ಬೋಧನೆ ಮಾಡಿರಿ."

(ಅನ್ನಿಸಾ: 5)

### 6. ಸಾಲಗಾರನನ್ನು ಪೀಡಿಸಬಾರದು

ಒಬ್ಬ ಬಡವನಿಗೆ ಆತನ ಅವಶ್ಯಕತೆಗಳಿಗಾಗಿ ಸಾಲ ಕೊಟ್ಟರೆ, ಅದನ್ನು ಮರಳಿ ಕೇಳಿ ಕಾಡಿಸಬಾರದು. ಅವನು ಅದನ್ನು ಸುಲಭವಾಗಿ ಮರುಪಾವತಿ ಮಾಡಲು ಸಾಧ್ಯವಾಗುವಷ್ಟು ಸಮಯಾವಕಾಶ ಕೊಡಬೇಕು. ಅವನು ನಿಜಕ್ಕೂ ಮರುಪಾವತಿ ಮಾಡಲು ಅಸಮರ್ಥನೆಂದು ಕಂಡಾಗ, ನಿಮ್ಮಲ್ಲಿ ಸಾಕಷ್ಟು ಸಂಪತ್ತಿದ್ದು, ನೀವು ಸುಲಭವಾಗಿ ಅವನನ್ನು ಕ್ಷಮಿಸಬಲ್ಲಿರೆಂದಾದರೆ ಕ್ಷಮಿಸಿ ಬಿಡುವುದೇ ಉತ್ತಮ-

وَإِنْ كَانَ ذُو عُسْرَةٍ فَنَظِرَةٌ إِلَىٰ مَيْسَرَةٍ ۚ وَأَن تَصَدَّقُوا خَيْرٌ لَّكُمْ ۖ إِن كُنتُمْ تَعْلَمُونَ ﴿٢٨٠﴾

"ಸಾಲ ಮಾಡಿದವನು ಬಡವನಾದರೆ ಅವನು ಸ್ಥಿತಿವಂತನಾಗುವವರೆಗೆ ಅವನಿಗೆ ಕಾಲಾವಕಾಶ ನೀಡಿರಿ. ಇನ್ನು ಅದನ್ನು ದಾನ ರೂಪದಲ್ಲಿ ಬಿಡುವುದರ ಪ್ರಯೋಜನವನ್ನು ನೀವು ಅರಿತಿರುವಿರಾದರೆ ದಾನ ಮಾಡಿ ಬಿಡುವುದೇ ಅತ್ಯುತ್ತಮ."

(ಅಲ್‌ಬಕರ:: 280)

### 7. ದಾನದಲ್ಲಿ ಸಮತೋಲನ

ದಾನ ಧರ್ಮ ಮಾಡುವಾಗಲೂ ಹದ ಮೀರಬಾರದು. ಮನುಷ್ಯನು ತನ್ನ ಹಾಗೂ ತನ್ನ ಮಕ್ಕಳು ಮರಿಗಳ ಹೊಟ್ಟೆ ಕಟ್ಟಿ ಇದ್ದುದನ್ನೆಲ್ಲಾ ದಾನ ಮಾಡಬೇಕೆಂದು ಅಲ್ಲಾಹನ ಉದ್ದೇಶವಲ್ಲ. ಸರಳ ಜೀವನ ನಡೆಸಲು ತನಗೆ ಬೇಕಾದಷ್ಟನ್ನು ತನಗಾಗಿಯೂ ತನ್ನ ಮಕ್ಕಳು ಮರಿಗಳಿ ಗಾಗಿಯೂ ಪ್ರತಿಯೊಬ್ಬನೂ ಖರ್ಚು ಮಾಡಬೇಕೆಂದೂ, ಉಳಿದುದನ್ನು ದೇವಮಾರ್ಗದಲ್ಲಿ ಕೊಡಬೇಕೆಂದೂ ಅವನು ಬಯಸುತ್ತಾನೆ-

وَيَسْأَلُونَكَ مَاذَا يُنفِقُونَ قُلِ الْعَفْوَ ۗ

"ನಾವು ದೇವ ಮಾರ್ಗದಲ್ಲಿ ಏನನ್ನು ಖರ್ಚು ಮಾಡಬೇಕೆಂದು ಕೇಳುತ್ತಾರೆ. "ನಿಮ್ಮ ಅವಶ್ಯಕತೆಗಿಂತ ಮಿಕ್ಕಿರುವುದನ್ನು" ಎಂದು ಹೇಳಿರಿ."

(ಅಲ್‌ಬಕರ:: 219)

وَالَّذِينَ إِذَا أَنفَقُوا لَمْ يُسْرِفُوا وَلَمْ يَقْتُرُوا وَكَانَ بَيْنَ ذَٰلِكَ قَوَامًا ﴿٦٧﴾

"ಅವರು ಖರ್ಚು ಮಾಡುವಾಗ ದುಂದುವೆಚ್ಚವನ್ನೂ ಮಾಡುವುದಿಲ್ಲ. ಜಿಪುಣತೆಯನ್ನೂ ತೋರುವುದಿಲ್ಲ. ಅವರ ಖರ್ಚು ಇವೆರಡರ ನಡುವೆ ಸಮತೂಕದಲ್ಲಿ ನಿಂತಿರುತ್ತದೆ."

(ಅಲ್ ಫುರ್ಕಾನ್: 67)

وَلَا تَجْعَلْ يَدَكَ مَغْلُولَةً إِلَىٰ عُنُقِكَ وَلَا تَبْسُطْهَا كُلَّ الْبَسْطِ
فَتَقْعُدَ مَلُومًا مَّحْسُورًا ﴿٢٩﴾

"ನಿಮ್ಮ ಕೈಯನ್ನು ಕೊರಳಿಗೆ ಕಟ್ಟಿಕೊಂಡಿರಲೂ ಬೇಡಿರಿ ಮತ್ತು ನಿಂದ್ಯರೂ ನಿಸ್ಸಹಾಯಕರೂ ಆಗಿ ಬಿಡುವಂತೆ ಅದನ್ನು ಸಂಪೂರ್ಣವಾಗಿ ತೆರೆದಿಟ್ಟು ಬಿಡಲೂ ಬೇಡಿರಿ."

(ಬನೀ ಇಸ್ರಾಈಲ್: 29)

## ದಾನಕ್ಕೆ ಅರ್ಹರು ಯಾರು?

ಕೊನೆಯದಾಗಿ ಅಲ್ಲಾಹನು ದಾನ ಪಡೆಯಲರ್ಹರಾದವರ ಒಂದು ಸಂಪೂರ್ಣ ಯಾದಿಯನ್ನೇ ಕೊಟ್ಟಿರುವುದನ್ನು ಗಮನಿಸಿರಿ. ಅದನ್ನು ಕಂಡಾಗ ನಿಮ್ಮಿಂದ ಸಹಾಯ ಪಡೆಯಲು ಅರ್ಹರಾದವರು ಯಾರು? ಮತ್ತು ಅಲ್ಲಾಹ್ ನಿಮ್ಮ ಸಂಪಾದನೆಯಲ್ಲಿ ಯಾರದೆಲ್ಲಾ ಹಕ್ಕಿಟ್ಟಿರುವನೆಂದು ತಿಳಿದು ಬರುವುದು.

وَاٰتِ ذَا الْقُرْبٰى حَقَّهٗ وَالْمِسْكِيْنَ وَابْنَ السَّبِيْلِ

"ಸಂಬಂಧಿಕನಿಗೆ ಅವನ ಹಕ್ಕನ್ನೂ ದರಿದ್ರನಿಗೂ ಪ್ರಯಾಣಿಕನಿಗೂ ಅವನವನ ಹಕ್ಕನ್ನೂ ಕೊಡಿರಿ."

(ಬನೀ ಇಸ್ರಾಈಲ್: 26)

وَاٰتَى الْمَالَ عَلٰى حُبِّهٖ ذَوِى الْقُرْبٰى وَالْيَتٰمٰى وَالْمَسٰكِيْنَ وَابْنَ السَّبِيْلِۙ

وَالسَّآئِلِيْنَ وَفِى الرِّقَابِۚ

"ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ ಅವನ ಸಂದೇಶವಾಹಕರನ್ನೂ ಹೃತ್ಪೂರ್ವಕ ಒಪ್ಪಿಕೊಳ್ಳುವುದೂ ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನಮೆಚ್ಚುಗೆಯ ಸಂಪತ್ತನ್ನು ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸಹಾಯಾರ್ಥಿಗಳಿಗೂ ದಾಸ್ಯವಿಮೋಚನೆಗಾಗಿಯೂ ವ್ಯಯಿಸುವುದೂ."

(ಅಲ್‌ಬಕರಃ: 177)

وَّبِالْوَالِدَيْنِ اِحْسَانًا وَّبِذِى الْقُرْبٰى وَالْيَتٰمٰى وَالْمَسٰكِيْنِ وَالْجَارِ ذِى

الْقُرْبٰى وَالْجَارِ الْجُنُبِ وَالصَّاحِبِ بِالْجَنْۢبِ وَابْنِ السَّبِيْلِۙ وَمَا مَلَكَتْ اَيْمَانُكُمْ

"ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕರೊಂದಿಗೂ ಆಪ್ತರಾದ ನೆರೆಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವರೊಂದಿಗೂ ಅನುಚರರೊಂದಿಗೂ ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ ದಾಸ ದಾಸಿಯರೊಂದಿಗೂ ಉತ್ತಮ ರೀತಿಯಿಂದ ವರ್ತಿಸಿರಿ."

(ಅನ್ನಿಸಾ: 36)

وَيُطْعِمُونَ الطَّعَامَ عَلَىٰ حُبِّهِ مِسْكِينًا وَيَتِيمًا وَأَسِيرًا ﴿٨﴾ إِنَّمَا
نُطْعِمُكُمْ لِوَجْهِ اللَّهِ لَا نُرِيدُ مِنكُمْ جَزَاءً وَلَا شُكُورًا ﴿٩﴾ إِنَّا نَخَافُ
مِن رَّبِّنَا يَوْمًا عَبُوسًا قَمْطَرِيرًا ﴿١٠﴾

"(ಸಜ್ಜನರು) ಅಲ್ಲಾಹನ ಮೇಲಿನ ಪ್ರೇಮದಿಂದ ದರಿದ್ರರಿಗೂ ಅನಾಥರಿಗೂ ಸೆರೆಯಾಳುಗಳಿಗೂ ಊಟ ಕೊಡುತ್ತಾರೆ. (ಮತ್ತು ಅವರೊಡನೆ ಹೇಳುತ್ತಾರೆ): ನಾವು ನಿಮಗೆ ಕೇವಲ ಅಲ್ಲಾಹನಿಗಾಗಿ ಉಣಿಸುತ್ತಿದ್ದೇವೆ. ನಾವು ನಿಮ್ಮಿಂದ ಯಾವುದೇ ಪ್ರತಿಫಲವನ್ನಾಗಲಿ, ಕೃತಜ್ಞತೆಯನ್ನಾಗಲಿ ಬಯಸುವುದಿಲ್ಲ. ನಮಗಂತು, ನಮ್ಮ ಪ್ರಭುವಿನಿಂದ ಆ ತೀವ್ರ ಕಾಠಿಣ್ಯದ ಅತ್ಯಂತ ಸುದೀರ್ಘ ದಿನದ ಭಯವಿದೆ." (ಅದ್ದಹ್ರ್: 8-10)

وَفِي أَمْوَالِهِمْ حَقٌّ لِّلسَّائِلِ وَالْمَحْرُومِ ﴿١٩﴾

"ಅವರ ಸೊತ್ತುಗಳಲ್ಲಿ ಬೇಡುವವರಿಗೂ ವಂಚಿತರಿಗೂ ಹಕ್ಕಿದೆ." (ಅದ್ದಾರಿಯಾತ್: 19)

لِلْفُقَرَاءِ الَّذِينَ أُحْصِرُوا فِي سَبِيلِ اللَّهِ لَا يَسْتَطِيعُونَ ضَرْبًا فِي الْأَرْضِ
يَحْسَبُهُمُ الْجَاهِلُ أَغْنِيَاءَ مِنَ التَّعَفُّفِ تَعْرِفُهُم بِسِيمَاهُمْ لَا يَسْأَلُونَ النَّاسَ
إِلْحَافًا ۗ وَمَا تُنفِقُوا مِنْ خَيْرٍ فَإِنَّ اللَّهَ بِهِ عَلِيمٌ ﴿٢٧٣﴾

"ಅಲ್ಲಾಹನ ಮಾರ್ಗದಲ್ಲಿ ಕಾರ್ಯವೆಸಗುವ ಭರದಲ್ಲಿ ತಮ್ಮ ಸ್ವಂತ ಜೀವನೋಪಾಯಕ್ಕಾಗಿ ಭೂಮಿಯಲ್ಲಿ ಶ್ರಮ ಪಡಲು ಸಾಧ್ಯವಾಗದಿರುವ ಬಡಜನರು ಮುಖ್ಯವಾಗಿ ಸಹಾಯಕ್ಕೆ ಅರ್ಹರಾಗಿದ್ದಾರೆ. ಅರಿವಿಲ್ಲದವನು ಅವರ ಸ್ವಾಭಿಮಾನವನ್ನು ಕಂಡು ಅವರು ಸ್ಥಿತಿವಂತ ರಾಗಿದ್ದಾರೆಂದೇ ಊಹಿಸುತ್ತಾರೆ. ನೀವು ಅವರ ಮುಖಭಾವಗಳಿಂದ ಅವರ ಆಂತರಿಕ ಸ್ಥಿತಿಯನ್ನು ತಿಳಿದುಕೊಳ್ಳಬಲ್ಲಿರಿ. ಆದರೆ, ಅವರು ಜನರ ಬೆಂಬತ್ತಿ ಬೇಡುವವರಲ್ಲ. ಅವರ ಸಹಾಯಾರ್ಥ ವಾಗಿ ನೀವು ಖರ್ಚು ಮಾಡುವ ಸಂಪತ್ತು ಅಲ್ಲಾಹನಿಂದ ಮರೆಯಾಗಿರದು."

(ಅಲ್‌ಬಕರಃ: 273)

# ಝಕಾತಿನ ನಿರ್ದಿಷ್ಟ ವಿಧಿಗಳು

ಮುಸ್ಲಿಮ್ ಬಂಧುಗಳೇ!

ಅಲ್ಲಾಹನ ಮಾರ್ಗದಲ್ಲಿ ವ್ಯಯಿಸುವ ಸಾಮಾನ್ಯ ವಿಧಿಗಳನ್ನು ಹಿಂದಿನ ಖುತ್‌ಬಾದಲ್ಲಿ ವಿವರಿಸಿರುತ್ತೇನೆ. ಈಗ ಝಕಾತಿಗೆ ಸಂಬಂಧಿಸಿದ ಇನ್ನೊಂದು ಭಾಗದ(ಕಡ್ಡಾಯಗೊಳಿಸಲಾಗಿರುವ ವಿಧಿ) ವಿವರಗಳನ್ನು ತಿಳಿಸುವೆನು.

## ಮೂರು ಆದೇಶಗಳು

ಝಕಾತಿನ ಕುರಿತು ಅಲ್ಲಾಹನು ಪವಿತ್ರ ಕುರ್‌ಆನಿನ ಮೂರು ಕಡೆಗಳಲ್ಲಿ ಪ್ರತ್ಯ ಪ್ರತ್ಯೇಕ ವಿಧಿಗಳನ್ನು ವಿವರಿಸಿರುತ್ತಾನೆ -

يَاأَيُّهَا الَّذِينَ آمَنُوا أَنفِقُوا مِن طَيِّبَاتِ مَا كَسَبْتُمْ وَمِمَّا أَخْرَجْنَا لَكُم مِّنَ الْأَرْضِ

1. "ಓ ಸತ್ಯ ವಿಶ್ವಾಸಿಗಳೇ, ನೀವು ಸಂಪಾದಿಸಿದ ಸಂಪತ್ತಿನಿಂದ ಮತ್ತು ನಾವು ನಿಮಗಾಗಿ ಭೂಮಿಯಿಂದ ಉತ್ಪಾದಿಸಿದವುಗಳಿಂದ ಉತ್ತಮವಾದವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡಿರಿ." (ಅಲ್‌ಬಕರಃ: 267)

2. ಸೂರಃ ಅಲ್ ಅನ್‌ಆಮ್‌ನಲ್ಲಿ, ಅಲ್ಲಾಹನು ಭೂಮಿಯಿಂದ ತೋಟಗಳನ್ನೂ ಹೊಲಗಳನ್ನೂ ಉಂಟು ಮಾಡಿರುವನೆಂಬ ಅನುಗ್ರಹವನ್ನು ನೆನಪಿಸಿದ ಬಳಿಕ ಹೀಗೆ ಹೇಳಲಾಗಿದೆ:

كُلُوا مِن ثَمَرِهِ إِذَا أَثْمَرَ وَآتُوا حَقَّهُ يَوْمَ حَصَادِهِ

"ಅವುಗಳು ಫಲಿಸಿದಾಗ ಫಲಗಳನ್ನು ತಿನ್ನಿರಿ. ಅವುಗಳ ಬೆಳೆಯುನ್ನು ಕೊಯ್ಯುವಾಗ ಅಲ್ಲಾಹನ ಹಕ್ಕನ್ನು ಸಂದಾಯ ಮಾಡಿರಿ." (ಸೂಕ್ತ: 141)

ಈ ಎರಡು ಸೂಕ್ತಗಳು ಭೂಮಿಯ ಬೆಳೆಗಳಿಗೆ ಸಂಬಂಧಿಸಿರುತ್ತವೆ. ಹನಫೀ ಕರ್ಮಶಾಸ್ತ್ರಜ್ಞರ ಅಭಿಪ್ರಾಯದಂತೆ ತಾನಾಗಿ ಬೆಳೆಯುವ ಕಟ್ಟಿಗೆ, ಹುಲ್ಲು, ಬಿದಿರುಗಳ ಹೊರತು ಇತರ ಧಾನ್ಯ, ತರಕಾರಿ, ಹಣ್ಣುಹಂಪಲುಗಳ ಸಾಲಿಗೆ ಸೇರುವ ಎಲ್ಲ ವಸ್ತುಗಳಿಂದಲೂ ಅಲ್ಲಾಹನ

ಹಕ್ಕನ್ನು ಪ್ರತ್ಯೇಕಿಸಬೇಕು. ಮಳೆನೀರಿನ ಸಹಾಯದಿಂದ ಬೆಳೆಸುವ ಬೆಳೆಗಳಿಂದ ಹತ್ತರಲ್ಲೊಂದಂಶವನ್ನೂ ಮಾನವನು ನೀರಾವರಿಯಿಂದ ಬೆಳೆಸುವ ಬೆಳೆಗಳಿಂದ ಇಪ್ಪತ್ತರಲ್ಲೊಂದಂಶವನ್ನೂ ಬೆಳೆಯ ಕೊಯ್ಲಾದ ಕೂಡಲೇ ಅಲ್ಲಾಹನ ಹಕ್ಕಿಗಾಗಿ ವಿಂಗಡಿಸಬೇಕಾದುದು ಕಡ್ಡಾಯವೆಂದು ಹದೀಸಿನಲ್ಲಿದೆ.

وَالَّذِيْنَ يَكْنِزُوْنَ الذَّهَبَ وَالْفِضَّةَ وَلَا يُنْفِقُوْنَهَا فِيْ سَبِيْلِ اللّٰهِ فَبَشِّرْهُمْ بِعَذَابٍ اَلِيْمٍ ﴿٣٤﴾ يَّوْمَ يُحْمٰى عَلَيْهَا فِيْ نَارِ جَهَنَّمَ فَتُكْوٰى بِهَا جِبَاهُهُمْ وَجُنُوْبُهُمْ وَظُهُوْرُهُمْ هٰذَا مَا كَنَزْتُمْ لِاَنْفُسِكُمْ فَذُوْقُوْا مَا كُنْتُمْ تَكْنِزُوْنَ ﴿٣٥﴾

3. "ಚಿನ್ನವನ್ನೂ ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ. ಈ ಚಿನ್ನ - ಬೆಳ್ಳಿಗಳ ಮೇಲೆ ನರಕಾಗ್ನಿಯನ್ನು ಉರಿಸಲಾಗುವುದು. ತರುವಾಯ ಅದರಿಂದಲೇ ಅವರ ಹಣೆಗಳಿಗೂ ಪಾರ್ಶ್ವಗಳಿಗೂ ಬೆನ್ನುಗಳಿಗೂ ಬರೆಹಾಕಲಾಗುವುದು - ನೀವು ನಿಮಗಾಗಿ ಸಂಗ್ರಹಿಸಿಟ್ಟಿದ್ದ ಸಂಪತ್ತು ಇದುವೇ, ಈಗ ನೀವು ಕೂಡಿ ಹಾಕಿದ್ದ ಸಂಪತ್ತನ್ನು ಸವಿಯಿರಿ." (ಎನ್ನಲಾಗುವುದು)
(ಅತ್ತೌಬ:: 34, 35)

اِنَّمَا الصَّدَقٰتُ لِلْفُقَرَآءِ وَالْمَسٰكِيْنِ وَالْعٰمِلِيْنَ عَلَيْهَا وَالْمُؤَلَّفَةِ قُلُوْبُهُمْ وَفِي الرِّقَابِ وَالْغٰرِمِيْنَ وَفِيْ سَبِيْلِ اللّٰهِ وَابْنِ السَّبِيْلِ فَرِيْضَةً مِّنَ اللّٰهِ وَاللّٰهُ عَلِيْمٌ حَكِيْمٌ ﴿٦٠﴾

"ವಾಸ್ತವದಲ್ಲಿ ಈ 'ಕಡ್ಡಾಯದಾನ'ಗಳು ಫಕೀರ(ಬಡವ)ರಿಗೆ, ಮಿಸ್ಕೀನ್(ದರಿದ್ರ)ರಿಗೆ, 'ಕಡ್ಡಾಯದಾನ'ಗಳ ಕಾರ್ಯಗಳಲ್ಲಿ ನೇಮಕಗೊಂಡವರಿಗೆ, ಮನವೊಲಿಸಬೇಕಾದ ಅಗತ್ಯವಿರುವವರಿಗೆ, ಕೊರಳು ಬಿಡಿಸುವುದಕ್ಕೆ, ಸಾಲಗಾರರಿಗೆ ನೆರವು ನೀಡಲಿಕ್ಕೆ ಅಲ್ಲಾಹನ ಮಾರ್ಗದಲ್ಲಿ ಮತ್ತು ಪ್ರಯಾಣಿಕರ ಆದರಕ್ಕಾಗಿ ಖರ್ಚು ಮಾಡಲಿಕ್ಕಾಗಿರುತ್ತವೆ. ಅಲ್ಲಾಹನ ಕಡೆಯ ಒಂದು ಕಡ್ಡಾಯವಿದು. ಅಲ್ಲಾಹನು ಸರ್ವಜ್ಞನೂ ಮಹಾ ಧೀಮಂತನೂ ಆಗಿರುತ್ತಾನೆ." (ಅತ್ತೌಬ:: 60)

ಆ ಬಳಿಕ ಹೀಗೆನ್ನಲಾಗಿದೆ:

خُذْ مِنْ اَمْوَالِهِمْ صَدَقَةً تُطَهِّرُهُمْ وَتُزَكِّيْهِمْ بِهَا

"ಓ ಪೈಗಂಬರರೇ, ನೀವು ಅವರ ಸಂಪತ್ತುಗಳಿಂದ 'ದಾನ ಧರ್ಮ'ಗಳನ್ನು ಪಡೆದು ಅವರನ್ನು ಶುದ್ಧೀಕರಿಸಿರಿ." (ಅತ್ತೌಬ:: 103)

ಸಂಪತ್ತನ್ನು ಸಂಗ್ರಹಿಸಿ, ಅದನ್ನು ವೃದ್ಧಿಸಿ, ಅದರಿಂದ ದೇವಮಾರ್ಗದಲ್ಲಿ ಖರ್ಚು ಮಾಡದಿರುವುದರಿಂದ ಅದು ಮಲಿನವಾಗುತ್ತದೆಂದೂ, ಅದರಿಂದ ಅಲ್ಲಾಹನ ಹಕ್ಕನ್ನು ತೆಗೆದು ಅವನ ದಾಸರಿಗೆ ಕೊಡುವುದರ ಮೂಲಕ ಮಾತ್ರ ಅದನ್ನು ಶುದ್ಧಗೊಳಿಸಬಹುದೆಂದೂ ಮೇಲಿನ ಮೂರು ಸೂಕ್ತಗಳಿಂದ ತಿಳಿಯಿತು. ಹದೀಸಿನಲ್ಲಿ ತಿಳಿಸಲಾಗಿರುವಂತೆ ಚಿನ್ನ ಬೆಳ್ಳಿಗಳನ್ನು ಸಂಗ್ರಹಿಸುವವರ ಕುರಿತು ಅಲ್ಲಾಹನ ಯಾತನೆಯ ಎಚ್ಚರಿಕೆ ಅವತೀರ್ಣಗೊಂಡಾಗ ಮುಸ್ಲಿಮರು ಬಹಳ ಚಿಂತೆಗೊಳಗಾದರು. ಏಕೆಂದರೆ ಒಂದು ದಿರ್‌ಹಮ್ (ಆ ಕಾಲದ ಬೆಳ್ಳಿಯ ನಾಣ್ಯ) ಕೂಡಾ ತಮ್ಮ ವಶದಲ್ಲಿಟ್ಟುಕೊಳ್ಳದೆ ಎಲ್ಲವನ್ನೂ ಖರ್ಚು ಮಾಡಬೇಕೆಂದು ಅದರ ಅರ್ಥವಾಗುತ್ತಿತ್ತು. ಕೊನೆಗೆ ಹ. ಉಮರ್‌ರವರು(ರ) ಪ್ರವಾದಿಯವರ(ಸ) ಬಳಿ ಹೋಗಿ ಸಮುದಾಯದ ವ್ಯಾಕುಲವನ್ನು ತಿಳಿಸಿದರು. ಆಗ ಅವರು(ಸ), "ಝಕಾತ್ ಕೊಟ್ಟ ಬಳಿಕ ಉಳಿಯುವ ಸಂಪತ್ತು ನಿಮಗೆ ಶುದ್ಧಗೊಳ್ಳುವುದಕ್ಕಾಗಿಯೇ ಅದನ್ನು ಕಡ್ಡಾಯಗೊಳಿಸಲಾಗಿದೆ" ಎಂದರು. ಇದೇ ರೀತಿಯ ಐತಿಹ್ಯವೊಂದು ಅಬೂಸಈದ್ ಖುದ್‌ರೀಯವರಿಂದ(ರ) ಉಲ್ಲೇಖಿತವಾಗಿದೆ. ಅದರಲ್ಲಿ, "ನೀನು ನಿನ್ನ ಸಂಪತ್ತಿನಿಂದ ಝಕಾತನ್ನು ಪ್ರತ್ಯೇಕಿಸಿ ಕೊಟ್ಟು ಬಿಟ್ಟರೆ ನಿನ್ನ ಮೇಲೆ ವಾಜಿಬ್ (ನಿರ್ಬಂಧ) ಆದ ಋಣವು ಸಂದಾಯವಾದಂತಾಯಿತು" ಎಂದಿದೆ.

ಮೇಲೆ ಉಲ್ಲೇಖಿಸಿದ ಸೂಕ್ತಗಳಲ್ಲಿ ಭೂಮಿಯ ಉತ್ಪತ್ತಿ ಮತ್ತು ಚಿನ್ನ - ಬೆಳ್ಳಿಗಳ ಝಕಾತ್‌ಗಳ ವಿಧಿ ಇದೆ. ಆದರೆ ವ್ಯಾಪಾರದ ಸರಕು, ಒಂಟೆ, ದನ ಮತ್ತು ಆಡುಗಳ ಮೇಲೂ ಝಕಾತ್ ಇದೆ ಎಂದು ಹದೀಸ್‌ಗಳಿಂದ ತಿಳಿಯುತ್ತದೆ.

## ಕೆಲವು ವಸ್ತುಗಳ ಝಕಾತ್‌ನ ಪ್ರಮಾಣ

ಬೆಳ್ಳಿಯ 'ನಿಸಾಬ್' (ಝಕಾತ್ ಕಡ್ಡಾಯವಾಗಲು ಇರಬೇಕಾದ ಕನಿಷ್ಠತಮ ಸೊತ್ತು) ಇನ್ನೂರು ದಿರ್ಹಮ್ ಅರ್ಥಾತ್ ಸುಮಾರು ಐವತ್ತೆರಡುವರೆ ತೊಲೆಯಷ್ಟು. ಚಿನ್ನದ ನಿಸಾಬ್ ಏಳೂವರೆ ತೊಲೆ. ಆಡುಗಳ ನಿಸಾಬ್ 40 ಆಡುಗಳು. ದನಗಳ ನಿಸಾಬ್ 30. ಅರ್ಥಾತ್ ಒಬ್ಬನ ಬಳಿ ಇಷ್ಟು ಸೊತ್ತು ಇದ್ದು, ಅದರ ಮೇಲೆ ಒಂದು ವರ್ಷ ಕಳೆದರೆ ಅದರಿಂದ ನಲ್ವತ್ತನೇ ಒಂದಂಶ ಝಕಾತ್ ಕೊಡಬೇಕಾದುದು ಕಡ್ಡಾಯವಾಗಿದೆ. ಚಿನ್ನ ಮತ್ತು ಬೆಳ್ಳಿ ಬೇರೆ ಬೇರೆಯಾಗಿ ನಿಸಾಬ್‌ನಷ್ಟು ಇಲ್ಲವಾದರೂ ಎರಡೂ ಸೇರಿದಾಗ ಅವುಗಳ ಬೆಲೆಯು ಯಾವುದಾದರೂ ಒಂದರ ನಿಸಾಬನ್ನು ತಲಪಿದರೆ, ಅವುಗಳ ಮೇಲೆ ಝಕಾತ್ ಕೊಡಬೇಕಾದುದು ಕಡ್ಡಾಯವಾಗಿದೆಯೆಂದು ಹನಫೀ ಕರ್ಮಶಾಸ್ತ್ರಜ್ಞರು ಹೇಳುತ್ತಾರೆ.

## ಆಭರಣಕ್ಕೆ ಝಕಾತ್

ಚಿನ್ನ-ಬೆಳ್ಳಿಗಳು ಆಭರಣಗಳ ರೂಪದಲ್ಲಿದ್ದರೆ ಹ. ಉಮರ್ ಮತ್ತು ಹ. ಇಬ್ನ್ ಮಸ್‌ಊದ್‌ರವರ(ರ) ಅಭಿಪ್ರಾಯ ಪ್ರಕಾರ ಝಕಾತ್ ಕೊಡಬೇಕಾದುದು ಕಡ್ಡಾಯ. ಇಮಾಮ್

ಅಬೂ ಹನೀಫಾರವರೂ(ರ) ಈ ಅಭಿಪ್ರಾಯವನ್ನೇ ಅಂಗೀಕರಿಸಿಕೊಂಡಿದ್ದಾರೆ. ಪ್ರವಾದಿಯವರು(ಸ) ಇಬ್ಬರು ಮಹಿಳೆಯರ ಕೈಗಳಲ್ಲಿ ಚಿನ್ನದ ಕಂಕಣ ಕಂಡಾಗ, "ನೀವಿದರ ಝಕಾತ್ ಕೊಡುತ್ತೀರಾ?" ಎಂದು ಕೇಳಿದರು. ಆಗ ಒಬ್ಬಾಕೆ, ಇಲ್ಲವೆಂದಳು. ಆಗ ಪ್ರವಾದಿ ಯವರು(ಸ), "ನೀನು ಅದರ ಬದಲಿಗೆ ನಿರ್ಣಾಯಕ ದಿನದಂದು ಅಗ್ನಿಯ ಕಂಕಣಗಳು ತೊಡಿಸಲ್ಪಡುವುದನ್ನು ಇಷ್ಟಪಡುವೆಯಾ?" ಎಂದು ಕೇಳಿದರೆಂದು ಹದೀಸಿನಲ್ಲಿದೆ. ಇದೇ ಪ್ರಕಾರ ಹ. ಉಮ್ಮು ಸಲಮರಿಂದ(ರ) ಹೀಗೆ ಉಲ್ಲೇಖಿತವಾಗಿದೆ: "ನನ್ನ ಹತ್ತಿರ ಚಿನ್ನದ ಕಾಲ್ಬಳೆ ಇತ್ತು. ನಾನು ಪ್ರವಾದಿಯವರೊಡನೆ(ಸ) ಇದೂ 'ಕನ್ಝ್' (ಸಂಗ್ರಹ) ಆಗಿದೆಯೇ? ಎಂದು ಕೇಳಿದೆ. ಆಗ ಅವರು, ಅದರಲ್ಲಿ ಝಕಾತಿನ ನಿಸಾಬ್‌ನಷ್ಟು ಚಿನ್ನ ಬೆರೆತಿದ್ದರೆ ಮತ್ತು ಅದರಿಂದ ಝಕಾತ್ ಪ್ರತ್ಯೇಕಿಸಿದರೆ ಅದು 'ಕನ್ಝ್' ಅಲ್ಲವೆಂದರು." ಈ ಎರಡು ಹದೀಸ್‌ಗಳಿಂದ ಚಿನ್ನ - ಬೆಳ್ಳಿಗಳು ಆಭರಣಗಳ ರೂಪದಲ್ಲಿದ್ದರೂ ನಗದು ರೂಪದಲ್ಲಿದ್ದಂತೆಯೇ ಝಕಾತ್ ಕಡ್ಡಾಯವಾಗಿರುತ್ತದೆ ಎಂದು ತಿಳಿಯುತ್ತದೆ. ಆದರೆ ಅದರೊಂದಿಗಿರುವ ಮುತ್ತು ರತ್ನಗಳ ಮೇಲೆ ಝಕಾತ್ ಇಲ್ಲ.

## ಝಕಾತ್‌ನ ಹಕ್ಕುದಾರರು

ಪವಿತ್ರ ಕುರ್‌ಆನಿನಲ್ಲಿ ಝಕಾತಿನ ಎಂಟು ಹಕ್ಕುದಾರರ ವಿವರಣೆ ಇದೆ. ಅದು ಈ ಕೆಳಗಿನಂತಿದೆ:

**1) ಫುಕರಾಲ್ (ದರಿದ್ರರು)**- ಇವರ ಬಳಿಯಿರುವ ಅಲ್ಪಸ್ವಲ್ಪ ಸೊತ್ತು ಅವರ ಅವಶ್ಯಕತೆಗೆ ಸಾಕಾಗುವುದಿಲ್ಲ. ಬಹಳ ಕಷ್ಟದಿಂದ ಅವರ ಜೀವನ ಸಾಗುತ್ತಿರುತ್ತದೆ. ಅವರು ಯಾರೊಡನೆಯೂ ಬೇಡುವುದಿಲ್ಲ. ಇಮಾಮ್ ಝುಹ್ರೀ, ಇಮಾಮ್ ಅಬೂ ಹನೀಫಾ, ಇಬ್ನ್ ಅಬ್ಬಾಸ್, ಹಸನ್ ಬಸ್‌ರೀ, ಅಬುಲ್ ಹಸನ್ ಕರ್‌ಖೀ(ರ) ಮತ್ತಿನ್ನಿತರ ಮಹನೀಯರು 'ಫಕೀರ್' ಎಂಬ ಪದಕ್ಕೆ ನೀಡಿದ ವ್ಯಾಖ್ಯೆ ಇದೇ ಆಗಿದೆ.

**2) ಮಸಾಕೀನ್ (ನಿರ್ಗತಿಕರು)**- ಇವರು ಅತ್ಯಂತ ದುರವಸ್ಥೆಯಲ್ಲಿರುವವರು, ತಮ್ಮ ಹೊಟ್ಟೆ ಹೊರೆಯಲಿಕ್ಕೂ ಗತಿಯಿಲ್ಲದವರು. ಹ. ಉಮರ್‌ರವರು(ರ) ಸಂಪಾದನೆ ಮಾಡಲು ಸಾಧ್ಯವಿದ್ದು ಉದ್ಯೋಗವೇನೂ ಸಿಗದಿರುವವರನ್ನೂ ನಿರ್ಗತಿಕರ ಸಾಲಿನಲ್ಲಿ ಸೇರಿಸಿದ್ದಾರೆ.

**3) ಆಮಿಲೀನ ಅಲೈಹಾ**- ಅರ್ಥಾತ್ ಝಕಾತ್ ವಸೂಲು ಮಾಡಲಿಕ್ಕಾಗಿ ಇಸ್ಲಾಮೀ ಸರಕಾರದಿಂದ ನೇಮಿಸಲ್ಪಟ್ಟವರು. ಅವರಿಗೆ ಝಕಾತ್ ಖಾತೆಯಿಂದ ಸಂಬಳ ಕೊಡಲಾಗುವುದು.

**4) ಮುಅಲ್ಲಫತುಲ್ ಕುಲೂಬ್**- ಅರ್ಥಾತ್ ಇಸ್ಲಾಮಿನ ಬೆಂಬಲಕ್ಕಾಗಿ ಅಥವಾ ಇಸ್ಲಾಮಿನ ವಿರೋಧವನ್ನು ತಡೆಯಲಿಕ್ಕಾಗಿ ಹಣ ಖರ್ಚು ಮಾಡಬೇಕಾಗಿ ಬರುವುದು. ಇದರಲ್ಲಿ ನಿಶ್ಚಿಂತರನ್ನಾಗಿ ಮಾಡಬೇಕಾದ ನವ ಮುಸ್ಲಿಮರೂ ಸೇರುತ್ತಾರೆ. ಅವರು ತಮ್ಮ ಕಾಫಿರ್ ಸಮುದಾಯವನ್ನು ತ್ಯಜಿಸಿ ಬಂದು ಮುಸ್ಲಿಮರನ್ನು ಸೇರಿಕೊಂಡ ಕಾರಣದಿಂದ ನಿರುದ್ಯೋಗಿಗಳಾದರೆ ಅಥವಾ ಕಷ್ಟಗಳಿಗೊಳಗಾದರೆ ಆಗಂತೂ ಅವರಿಗೆ ಸಹಾಯವೊದಗಿಸಬೇಕಾದುದು ಮುಸ್ಲಿಮರ ಕರ್ತವ್ಯವೇ ಆಗಿರುತ್ತದೆ. ಆದರೆ ಅವರ ಮನಸ್ಸು ಇಸ್ಲಾಮಿನಲ್ಲಿ ನೆಲೆ ನಿಲ್ಲಲಿಕ್ಕಾಗಿ ಅವರು ಧನಿಕರಾಗಿದ್ದರೂ ಅವರಿಗೆ ಝಕಾತ್ ಕೊಡಬಹುದು. ಪ್ರವಾದಿಯವರು(ಸ) ಹುನೈನ್

ಯುದ್ಧ ಕಾಲದಲ್ಲಿ ಸಮರಾರ್ಜಿತ ಸೊತ್ತಿನಿಂದ ನವ ಮುಸ್ಲಿಮರಿಗೆ ಧಾರಾಳವಾಗಿ ಕೊಟ್ಟಿದ್ದರು. ಆಗ ಒಬ್ಬೊಬ್ಬ ನವ ಮುಸ್ಲಿಮನ ಪಾಲಿಗೆ ನೂರು ಒಂಟೆಗಳು ಸಿಕ್ಕಿದುವು. ಅನ್ಸಾರರು ಈ ಬಗ್ಗೆ ದೂರಿತ್ತಾಗ ಪ್ರವಾದಿಯವರು(ಸ), "ಇವರು ಈಗತಾನೇ ಕುಫ್ರ್‌ನಿಂದ ಇಸ್ಲಾಮಿನೊಳಗೆ ಪ್ರವೇಶಿಸಿದ್ದಾರಷ್ಟೇ. ನಾನು ಅವರ ಮನಸ್ಸನ್ನು ಸಂತೋಷಗೊಳಿಸಲಿಚ್ಛಿಸುತ್ತೇನೆ" ಎಂದರು. ಆದುದರಿಂದಲೇ ಇಮಾಮ್ ಝುಹ್‌ರೀಯವರು(ರ) "ಮುಅಲ್ಲಫತುಲ್ ಕುಲೂಬ್" ಎಂಬುದನ್ನು "ಇಸ್ಲಾಮ್ ಪ್ರವೇಶಿಸಿದ ಕ್ರೈಸ್ತ, ಯಹೂದಿ ಅಥವಾ ಇತರ ಮುಸ್ಲಿಮೇತರನು, ಅವನು ಧನಿಕನೇ ಆಗಿದ್ದರೂ ಸಹ" ಎಂದು ವ್ಯಾಖ್ಯಾನಿಸಿದ್ದಾರೆ.*

5) **'ಫಿರ್ರಿಕಾಬ್'**- ಅರ್ಥಾತ್ ದಾಸ್ಯ ಬಂಧನದಿಂದ ವಿಮೋಚನೆಗೊಳ್ಳ ಬಯಸುವ ಗುಲಾಮನು ತನ್ನ ಮಾಲಿಕನಿಗೆ ಹಣಕೊಟ್ಟು ಬಿಡುಗಡೆಗೊಳ್ಳಲು ಆತನಿಗೆ ಝುಕಾತ್ ಕೊಡಬಹುದು. ಈ ಕಾಲದಲ್ಲಿ ಗುಲಾಮಗಿರಿ ಪದ್ಧತಿ ಎಲ್ಲೂ ಇಲ್ಲ. ಆದುದರಿಂದ ಜುಲ್ಮಾನೆ ಕೊಡಲಿಕ್ಕಾಗದೆ ಸೆರೆವಾಸ ಅನುಭವಿಸುತ್ತಿರುವವರನ್ನು ಬಿಡುಗಡೆಗೊಳಿಸಲಿಕ್ಕಾಗಿ ಝುಕಾತಿನ ಹಣದಿಂದ ಸಹಾಯ ಮಾಡಬಹುದು. ಇದು 'ಫಿರ್ರಿಕಾಬ್'ನ ವ್ಯಾಪ್ತಿಯಲ್ಲೇ ಸೇರುತ್ತದೆಂದು ನನ್ನ ಅಭಿಪ್ರಾಯ.

6) **'ಅಲ್‌ಗಾರಿಮೂನ್' (ಸಾಲಗಾರರು)**- ಒಬ್ಬನ ಹತ್ತಿರ ಸಾವಿರಾರು ರೂಪಾಯಿಗಳಿದ್ದು ಅಂಥವನು ಕೇವಲ ಕೆಲವು 100 ರೂಪಾಯಿಗಳ ಸಾಲಗಾರನಾಗಿದ್ದರೂ ಅವನಿಗೆ ಸಹಾಯ ಮಾಡಬೇಕೆಂದು ಇದರ ಅರ್ಥವಲ್ಲ. ಒಬ್ಬನು ತನ್ನ ಸಾಲ ಸಂದಾಯ ಮಾಡಿದ ಬಳಿಕ ಅವನಲ್ಲಿ 'ನಿಸಾಬ್'ಗಿಂತಲೂ ಕಡಿಮೆ ಉಳಿಯುವುದೆಂದಾದರೆ, ಅಂಥವನಿಗೆ ಝುಕಾತ್ ಕೊಡಬಹುದು. ಯಾರಾದರೂ ದುಂದು ವೆಚ್ಚ ಮಾಡಿ ಅಥವಾ ದುಷ್ಟಟಗಳ ಕಾರಣದಿಂದ ಸಾಲಗಾರನಾಗಿದ್ದರೆ ಅಂಥವನಿಗೆ ಝುಕಾತ್ ಕೊಡುವುದು 'ಮಕ್ರೂಹ್' (ಅಪೇಕ್ಷಣೀಯವಲ್ಲದ ಕಾರ್ಯ) ಎಂದು ಕರ್ಮಶಾಸ್ತ್ರಜ್ಞರು ಹೇಳಿದ್ದಾರೆ. ಏಕೆಂದರೆ ಅಂಥವನು ತನಗೆ ಝುಕಾತ್ ಸಿಗಲಿದೆಯೆಂದೂ ಅದರಿಂದ ಸಾಲ ತೀರಿಸುವೆನೆಂದೂ ನಂಬಿ, ಇನ್ನಷ್ಟು ಧೈರ್ಯದಿಂದ ದುಷ್ಕೃತ್ಯಗಳನ್ನೂ ದುಂದು ವೆಚ್ಚವನ್ನೂ ಮಾಡತೊಡಗುವನು.

7) **'ಫೀ ಸಬೀಲಿಲ್ಲಾಹ್'**- ಇದು ಎಲ್ಲಾ ಸತ್ಕಾರ್ಯಗಳಿಗೂ ಅನ್ವಯಿಸುವ ಸಾಮಾನ್ಯ ಪದ. ಆದರೆ ನಿರ್ದಿಷ್ಟವಾಗಿ ಇದರ ಅರ್ಥ ಸತ್ಯ ಧರ್ಮದ ಉತ್ಥಾನಕ್ಕಾಗಿ ನಡೆಸುತ್ತಿರುವ ಎಲ್ಲಾ ತರದ ಹೋರಾಟಗಳಿಗೆ ಸಹಾಯ ನೀಡುವುದು ಎಂದಾಗಿದೆ. ಧನಿಕನಿಗೆ ಝುಕಾತ್ ಪಡೆಯುವುದು ನಿಷಿದ್ಧವಾದರೂ ಅವನು ಜಿಹಾದ್‌ಗಾಗಿ (ಧರ್ಮಕ್ಕಾಗಿ ಹೋರಾಟ) ಸಹಾಯ ಬಯಸುವನಾದರೆ ಅವನಿಗೆ ಝುಕಾತ್ ಕೊಡಬೇಕೆಂದು ಪ್ರವಾದಿ(ಸ) ಹೇಳಿರುತ್ತಾರೆ. ಏಕೆಂದರೆ ಒಬ್ಬನು ಸ್ವತಃ ಧನಿಕನಾಗಿರಬಹುದು. ಆದರೆ ಜಿಹಾದ್‌ಗೆ ಬೇಕಾಗುವ ಮೊಬಲಗಿಗೆ ಮಿತಿಯಿಲ್ಲ.

*ಇಲ್ಲಿ ಈ ಕುರಿತು ಕರ್ಮಶಾಸ್ತ್ರ ಪರವಾದ ವಿವರಗಳನ್ನು ನೀಡಲು ಅವಕಾಶವಿಲ್ಲ. ಈ ಕುರಿತು ಹೆಚ್ಚಿನ ವಿವರಗಳನ್ನು 'ತಫ್ಹೀಮುಲ್ ಕುರ್‌ಆನ್' (ಕುರ್‌ಆನ್ ವ್ಯಾಖ್ಯಾನ ಗ್ರಂಥದಲ್ಲಿ) ಅತ್ತೌಬಃ ಅಧ್ಯಾಯದ ವ್ಯಾಖ್ಯಾನದಲ್ಲಿ ಕಾಣಬಹುದು.

ಅದನ್ನು ಒಬ್ಬನೇ ತನ್ನ ಸ್ವಂತ ಹಣದಿಂದ ಪೂರೈಸಿಕೊಳ್ಳಲಾರ. ಈ ಕಾರ್ಯಕ್ಕೆ ಝಕಾತಿ ನಿಂದ ಸಹಾಯ ಮಾಡಬೇಕು.

8) 'ಇಬ್ನುಸ್ಸಬೀಲ್' (ಪ್ರಯಾಣಿಕ)- ಒಬ್ಬ ಪ್ರಯಾಣಿಕನಿಗೆ ಸ್ವಂತ ಊರಲ್ಲಿ ಎಷ್ಟು ಸಂಪತ್ತಿದ್ದರೂ ಅವನು ಪ್ರಯಾಣಾವಸ್ಥೆಯಲ್ಲಿ ಕಂಗಾಲಾಗಿದ್ದರೆ ಅವನಿಗೆ ಝಕಾತ್ ಕೊಡಬೇಕು.

## ಝಕಾತ್ ಯಾರಿಗೆ ಕೊಡಬೇಕು? ಯಾರಿಗೆ ಕೊಡಬಾರದು?

ಈಗ ವಿವರಿಸಲಾದ ಈ ಎಂಟು ವರ್ಗಗಳಲ್ಲಿ ಯಾರಿಗೆ ಯಾವ ಸ್ಥಿತಿಯಲ್ಲಿ ಝಕಾತ್ ಕೊಡಬೇಕು ಮತ್ತು ಯಾವ ಸ್ಥಿತಿಯಲ್ಲಿ ಝಕಾತ್ ಕೊಡಬಾರದೆಂಬ ಪ್ರಶ್ನೆ ಉಳಿಯುತ್ತದೆ. ಅದರ ವಿವರಣೆಯನ್ನು ಸ್ವಲ್ಪ ಮಟ್ಟಿಗೆ ಕೊಡುವೆನು-

1) ಯಾರೂ ತನ್ನ ತಂದೆ ಅಥವಾ ಮಗನಿಗೆ ಝಕಾತ್ ಕೊಡಬಾರದು. ಪತಿಯು ತನ್ನ ಪತ್ನಿಗೂ, ಪತ್ನಿಯು ತನ್ನ ಪತಿಗೂ ಕೊಡಬಾರದು. ಇದರಲ್ಲಿ ಕರ್ಮಶಾಸ್ತ್ರಜ್ಞರು ಒಮ್ಮತರಾಗಿರುತ್ತಾರೆ. ನಿಮ್ಮ ಪರಿಪಾಲನೆಯಲ್ಲಿರುವಂತಹ ಸಮೀಪದ ಸಂಬಂಧಿಕರಿಗೂ ಶರೀಅತ್ (ಧರ್ಮಶಾಸ್ತ್ರ) ಪ್ರಕಾರ ವಾರೀಸುದಾರರಾಗುವವರಿಗೂ ಝಕಾತ್ ಕೊಡಬಾರದೆಂದು ಕೆಲವು ಕರ್ಮಶಾಸ್ತ್ರಜ್ಞರು ಹೇಳುತ್ತಾರೆ. ಆದರೆ ದೂರದ ಸಂಬಂಧಿಕರು ಝಕಾತನ್ನು ಪಡೆಯುವ ಹಕ್ಕುದಾರರಾಗಿರುತ್ತಾರೆ. ಮಾತ್ರವಲ್ಲ ಇತರರಿಗಿಂತ ಇವರೇ ಹೆಚ್ಚು ಹಕ್ಕುಳ್ಳವರು. ಆದರೆ ಝಕಾತ್ ತೆಗೆದಿಟ್ಟು ತನ್ನ ಸಂಬಂಧಿಕರನ್ನೇ ಹುಡುಕುತ್ತಿರಬಾರದೆಂದು ಇಮಾಮ್ ಔಝಾಈ(ರ) ಹೇಳುತ್ತಾರೆ.

2) ಝಕಾತ್ ಕೇವಲ ಮುಸ್ಲಿಮರ ಹಕ್ಕು. ಮುಸ್ಲಿಮೇತರರಿಗೆ ಅದರಲ್ಲಿ ಹಕ್ಕಿಲ್ಲ.

تُؤْخَذُ مِنْ اَغْنِيَائِكُمْ وَتُرَدُّ فِيْ فُقَرَائِكُمْ

"ಅದನ್ನು ನಿಮ್ಮ ಧನಿಕರಿಂದ ಪಡೆದು ನಿಮ್ಮ ಬಡವರಿಗೆ ವಿತರಣೆ ಮಾಡಲಾಗುವುದು" ಎಂದು ಹದೀಸಿನಲ್ಲಿದೆ. ಇತರ ಸಾಮಾನ್ಯ ದಾನ ಧರ್ಮಗಳಲ್ಲಿ ಮುಸ್ಲಿಮೇತರರಿಗೂ ಪಾಲು ಕೊಡಲಾಗುವುದು. ಅಂತಹ ದಾನಗಳನ್ನು ಮುಸ್ಲಿಮರಿಗೆ ಮಾತ್ರ ಕೊಟ್ಟು ಸಹಾಯಾರ್ಹರಾದ ಮುಸ್ಲಿಮೇತರರಿಗೆ ಕೊಡದಿರುವುದು ಸರಿಯಲ್ಲ.

3) ಇಮಾಮ್ ಅಬೂ ಹನೀಫಾ, ಇಮಾಮ್ ಅಬೂ ಯೂಸುಫ್ ಮತ್ತು ಇಮಾಮ್ ಅಹ್ಮದ್‌ರವರು(ರ) ಆಯಾ ಊರಿನ ಝಕಾತ್ ಆಯಾ ಊರಲ್ಲೇ ವಿತರಣೆಯಾಗಬೇಕೆನ್ನುತ್ತಾರೆ. ಅದೇ ಊರಲ್ಲಿ ಝಕಾತ್ ಪಡೆಯತಕ್ಕ ಹಕ್ಕುದಾರರು ಇಲ್ಲದಿದ್ದಾಗ ಅಥವಾ ಪ್ರವಾಹ- ಬರಗಾಲ ಮೊದಲಾದವುಗಳಿಗೆ ತುತ್ತಾದ ಇತರ ಊರವರಿಗೆ ಸಹಾಯ ಒದಗಿಸ ಬೇಕಾದಾಗ ಝಕಾತನ್ನು ಇನ್ನೊಂದೂರಿಗೆ ಕಳುಹಿಸಬಹುದು. ಇಮಾಮ್ ಮಾಲಿಕ್ ಮತ್ತು ಸುಫಿಯಾನ್ ಸೂರಿಯವರ(ರ) ಅಭಿಪ್ರಾಯಗಳೂ ಹೀಗೆಯೇ ಇದೆ. ಆದರೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ಝಕಾತನ್ನು ಕಳುಹಿಸಿಕೊಡಲೇ ಬಾರದೆಂದು ಇದರ ಅರ್ಥವಲ್ಲ.

4) ಕೆಲವು ವಿದ್ವಾಂಸರ ಅಭಿಪ್ರಾಯ ಪ್ರಕಾರ ಎರಡು ಹೊತ್ತಿನ ಊಟಕ್ಕೆ ಬೇಕಾಗುವಷ್ಟು ಇರುವವರು ಝಕಾತ್ ಪಡೆಯಬಾರದು. ತಮ್ಮ ಬಳಿ ಹತ್ತು ರೂಪಾಯಿ ಇರುವವರು ಝಕಾತ್ ಪಡೆಯಬಾರದೆಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಹನ್ನೆರಡುವರೆ ರೂಪಾಯಿ ಇರುವವರು ಝಕಾತ್ ಪಡೆಯಬಾರದೆನ್ನುತ್ತಾರೆ. ಆದರೆ ಇಮಾಮ್ ಅಬೂ ಹನೀಫಾ(ರ) ಮತ್ತು ಎಲ್ಲಾ ಹನಫೀ ಕರ್ಮಶಾಸ್ತ್ರಜ್ಞರ ಅಭಿಪ್ರಾಯ ಪ್ರಕಾರ ತಮ್ಮ ಬಳಿ ಐವತ್ತು ರೂಪಾಯಿಗಿಂತ ಕಡಿಮೆಯಿರುವವರು ಝಕಾತ್ ಪಡೆಯಬಹುದು. ಇದರಲ್ಲಿ ಮನೆ, ಮನೆಯ ಸಾಮಾನು, ಸವಾರಿ ಮಾಡುವ ಕುದುರೆ ಮತ್ತು ನೌಕರರು ಸೇರುವುದಿಲ್ಲ. ಈ ವಿಷಯದಲ್ಲಿ ಕಾನೂನಿನ ವಿಚಾರ ಒಂದಾದರೆ ಔನ್ನತ್ಯದ ವಿಚಾರ ಇನ್ನೊಂದಾಗಿದೆ. ಇವೆರಡರಲ್ಲಿ ಅಂತರವಿದೆ. ಬೆಳಗು ಬೈಗುಗಳ ಆಹಾರ ಸಾಮಗ್ರಿಗಳಿರುವಾತನು ಯಾಚನೆಗಾಗಿ ಕೈಚಾಚಿದರೆ, ಅವನು ತನ್ನ ಪಾಲಿಗೆ ಅಗ್ನಿಯನ್ನು ಕೂಡಿ ಹಾಕುತ್ತಾನೆಂದು ಪ್ರವಾದಿ(ಸ) ಹೇಳಿರುತ್ತಾರೆ. ಇನ್ನೊಂದು ಹದೀಸಿನಲ್ಲಿ- ಒಬ್ಬನು ಯಾಚನೆಗಾಗಿ ಕೈಯೊಡ್ಡುವುದಕ್ಕಿಂತ ಸೌದೆ ಕಡಿದು ತನ್ನ ಹೊಟ್ಟೆ ಹೊರೆಯುವುದನ್ನು ನಾನು ಮೆಚ್ಚುತ್ತೇನೆಂದು ಪ್ರವಾದಿ(ಸ) ಹೇಳಿರುತ್ತಾರೆ. ಝಕಾತ್ ಪಡೆಯುವ ಕಾರ್ಯವು ಊಟಕ್ಕಿರುವ ಮತ್ತು ಸಂಪಾದನೆ ಮಾಡಲು ಶಕ್ತಿಯುಳ್ಳವನಿಗೆ ಹೇಳಿಸಿದುದಲ್ಲವೆಂದು ಮೂರನೆಯ ಹದೀಸೊಂದರಲ್ಲಿದೆ. ಆದರೆ ಇದು ಔನ್ನತ್ಯದ ಬೋಧನೆಯಾಯಿತು. ಇನ್ನು ಕಾನೂನಿನ ವಿಚಾರ, ಕಾನೂನು ಪ್ರಕಾರ ಒಬ್ಬನು ಝಕಾತ್ ಪಡೆಯುವ ಹಕ್ಕನ್ನು ಹೊಂದಿರಬೇಕಾದರೆ ಅದರ ಅಂತಿಮ ಮೇರೆ ಎಷ್ಟೆಂದು ತಿಳಿಸಬೇಕಾದುದು ಅಗತ್ಯ. ಈ ವಿಷಯ ಇನ್ನೊಂದು ಹದೀಸಿನಲ್ಲಿ ಸಿಗುತ್ತದೆ. ಉದಾ: لِلسَّائِلِ حَقٌّ وَإِنْ جَاءَ عَلَى الْفَرَسِ "ಯಾಚಕನು ಕುದುರೆಯನ್ನೇರಿ ಬಂದರೂ ಅವನಿಗೆ ಹಕ್ಕಿದೆ"ಯೆಂದು ಪ್ರವಾದಿ(ಸ) ಹೇಳಿರುತ್ತಾರೆ. "ನನ್ನಲ್ಲಿ ಹತ್ತು ರೂಪಾಯಿಗಳಿವೆ. ನಾನು ನಿರ್ಗತಿಕನೇ?" ಎಂದೊಬ್ಬನು ಪ್ರವಾದಿಯವರೊಡನೆ(ಸ) ಕೇಳಿದಾಗ ಅವರು 'ಹೌದು' ಎಂದರು. ಒಮ್ಮೆ ಇಬ್ಬರು ಬಂದು ಪ್ರವಾದಿಯವರೊಡನೆ(ಸ) ಝಕಾತ್ ಬೇಡಿದರು. ಪ್ರವಾದಿಯವರು(ಸ) ಅವರ ಕಡೆಗೆ ದಿಟ್ಟಿಸಿ ನೋಡಿ, "ನೀವು ಪಡೆಯಲು ಇಷ್ಟಪಡುವಿರಾದರೆ ನಾನು ಕೊಡುವೆನು. ಆದರೆ ಈ ಸೊತ್ತಿನಲ್ಲಿ ಧನಿಕರಿಗೆ ಮತ್ತು ದುಡಿಯಲು ಸಾಧ್ಯವಿರುವ ದೃಢಕಾಯರಿಗೆ ಪಾಲಿಲ್ಲ" ಎಂದರು. ಈ ಎಲ್ಲಾ ಹದೀಸ್ ಗಳಿಂದ 'ನಿಸಾಬ್'ಗಿಂತ ಕಡಿಮೆ ಆರ್ಥಿಕ ಬಲವಿರುವವರು ದರಿದ್ರರ ಸಾಲಿಗೆ ಬರುತ್ತಾರೆ ಮತ್ತು ಅಂಥವರಿಗೆ ಝಕಾತ್ ಕೊಡಬಹುದು ಎಂದು ತಿಳಿಯುತ್ತದೆ. ಝಕಾತ್ ಪಡೆಯುವ ಹಕ್ಕು ಸಹಜವಾಗಿಯೂ ಬಡವನಿಗೆ ಮಾತ್ರ ಸಲ್ಲುತ್ತದೆಂಬ ಮಾತು ಬೇರೆ.

## ಝಕಾತ್‌ನ ಸಾಮೂಹಿಕ ವ್ಯವಸ್ಥೆಯ ಅಗತ್ಯ

ಝಕಾತಿನ ವಿಷಯದಲ್ಲಿ ಅಗತ್ಯವುಳ್ಳ ವಿಧಿಗಳನ್ನು ನಾನೀಗ ವಿವರಿಸಿದೆ. ಆದರೆ ಇವೆಲ್ಲವುಗಳೊಂದಿಗೆ ಅತಿ ಪ್ರಮುಖವೂ ಅವಶ್ಯವೂ ಆದ ಇನ್ನೊಂದು ವಿಷಯವಿದೆ. ಇಂದು ಮುಸ್ಲಿಮರು ಮರೆತೇ ಬಿಟ್ಟಿರುವ ಈ ವಿಷಯದ ಕಡೆಗೂ ನಿಮ್ಮ ಗಮನ ಸೆಳೆಯಬೇಕಾದುದು

ಅಗತ್ಯವೆಂದು ಭಾವಿಸುತ್ತೇನೆ. ಇಸ್ಲಾಮಿನ ಎಲ್ಲಾ ಕಾರ್ಯಗಳೂ ಸಾಮೂಹಿಕ ವ್ಯವಸ್ಥೆಯೊಂದಿಗೆ ನಡೆಯುತ್ತವೆ. ವೈಯಕ್ತಿಕತೆಯನ್ನು ಇಸ್ಲಾಮ್ ಮೆಚ್ಚುವುದಿಲ್ಲ. ನೀವು ಮಸೀದಿಯಿಂದ ದೂರವಿದ್ದಾಗ ಒಬ್ಬೊಬ್ಬರಾಗಿ ನಮಾಝ್ ಮಾಡಿದರೂ ಆಗಿ ಹೋಗುತ್ತದೆ. ಆದರೆ ನೀವು ಜಮಾಅತಿನೊಂದಿಗೆ (ಸಾಮೂಹಿಕವಾಗಿ) ನಮಾಝ್ ಮಾಡಬೇಕೆಂದು ಧರ್ಮಶಾಸ್ತ್ರ ಹೇಳುತ್ತದೆ. ಇದೇ ರೀತಿಯಲ್ಲಿ ಝಕಾತಿನ ಸಾಮೂಹಿಕ ವ್ಯವಸ್ಥೆ ಇಲ್ಲದಿದ್ದಾಗ ವೈಯಕ್ತಿಕವಾಗಿ ಝಕಾತ್ ವಿತರಣೆ ಮಾಡಿದರೆ ತಪ್ಪಿಲ್ಲ. ಆದರೆ ಝಕಾತನ್ನು ಒಂದೇ ಕೇಂದ್ರದಲ್ಲಿ ಶೇಖರಿಸಿ ಅದನ್ನು ವ್ಯವಸ್ಥಿತವಾಗಿ ವಿತರಣೆ ಮಾಡುವ ಪ್ರಯತ್ನ ಕೈಗೊಳ್ಳಬೇಕಾದುದು ಅತ್ಯಗತ್ಯ. ಕುರ್ಆನಿನಲ್ಲಿ ಇದೇ ವಿಷಯದ ಕಡೆಗೆ ಸೂಚನೆ ನೀಡಲಾಗಿದೆ-

ಉದಾ: خُذْ مِنْ أَمْوَالِهِمْ صَدَقَةً "ನೀವು ಅವರಿಂದ ಝಕಾತ್ ವಸೂಲು ಮಾಡಿರಿ" **(ಸೂರಃ ಅತ್ತೌಬ: 103)** ಎಂದು ಅಲ್ಲಾಹನು ಪ್ರವಾದಿವರ್ಯರಿಗೆ(ಸ) ಆಜ್ಞಾಪಿಸಿದ್ದಾನೆ. ನೀವು ಝಕಾತನ್ನು ಬೇರೆ ಬೇರೆಯಾಗಿ ಖರ್ಚು ಮಾಡಿರೆಂದು ಮುಸ್ಲಿಮರೊಡನೆ ಹೇಳಲಿಲ್ಲ. ಇದೇ ರೀತಿಯಲ್ಲಿ ಝಕಾತ್ ಸಂಗ್ರಹ ಮಾಡುವ ಕಾರ್ಯಕರ್ತರನ್ನೂ ಝಕಾತಿನ ಹಕ್ಕುದಾರರನ್ನಾಗಿ ನಿಶ್ಚಯಿಸಿರುವುದರಿಂದ ಇಸ್ಲಾಮೀ ಸರಕಾರವು ಮುಸ್ಲಿಮರಿಂದ ಕ್ರಮವಾಗಿ ಝಕಾತನ್ನು ವಸೂಲು ಮಾಡಿ ಅದನ್ನು ಕ್ರಮವಾಗಿ ವಿತರಣೆ ಮಾಡುವುದೇ ಸರಿಯಾದ ನಿಯಮವೆಂದು ತಿಳಿದು ಬರುತ್ತದೆ. ಇದೇ ರೀತಿಯಲ್ಲಿ -

أُمِرْتُ أَنْ آخُذَ الصَّدَقَةَ مِنْ أَغْنِيَائِكُمْ وَأَرُدَّهَا فِي فُقَرَائِكُمْ.

"ನಿಮ್ಮ ಧನಿಕರಿಂದ ಝಕಾತನ್ನು ವಸೂಲು ಮಾಡಿ, ಅದನ್ನು ನಿಮ್ಮ ದರಿದ್ರರಿಗೆ ವಿತರಣೆ ಮಾಡಬೇಕೆಂದು ಅಲ್ಲಾಹ್ ನನಗೆ ಆಜ್ಞೆ ನೀಡಿರುತ್ತಾನೆಂದು" ಪ್ರವಾದಿ(ಸ) ಹೇಳಿರುವರು. ಈ ಕ್ರಮವೇ ಪ್ರವಾದಿಯವರ(ಸ) ಮತ್ತು ಖುಲಫಾಉರ್ರಾಷಿದೀನ್‌ರ ಕಾಲದಲ್ಲಿಯೂ ಆಚರಣೆಯಲ್ಲಿತ್ತು. ಇಸ್ಲಾಮೀ ಸರಕಾರದ ಉದ್ಯೋಗಿಗಳು ಝಕಾತನ್ನು ವಸೂಲು ಮಾಡುತ್ತಿದ್ದರು. ಅದನ್ನು ಕೇಂದ್ರ ಸರಕಾರದ ಮೂಲಕ ವಿತರಣೆ ಮಾಡಲಾಗುತ್ತಿತ್ತು. ಇಂದು ಇಸ್ಲಾಮೀ ಸರಕಾರವಿಲ್ಲದಿರುವಾಗ ಹಾಗೂ ಝಕಾತ್‌ನ ವಸೂಲಿ ಮತ್ತು ವಿತರಣೆ ಮಾಡುವ ಸಾಮೂಹಿಕ ವ್ಯವಸ್ಥೆಯೂ ಇಲ್ಲದಿರುವಾಗ ನೀವು ಪ್ರತ್ಯಪ್ರತ್ಯೇಕವಾಗಿ ನಿಮ್ಮನಿಮ್ಮ ಝಕಾತ್ ತೆಗೆದು ಧಾರ್ಮಿಕ ಕಾರ್ಯಗಳಲ್ಲಿ ವಿನಿಯೋಗಿಸಬಹುದು. ಆದರೆ ಝಕಾತ್ ಸಂಗ್ರಹ ಮತ್ತು ವಿತರಣೆಯ ಒಂದು ಸಾಮೂಹಿಕ ವ್ಯವಸ್ಥೆಯನ್ನು ರೂಪಿಸುವ ದಿಸೆಯಲ್ಲಿ ಯೋಚಿಸಿ ಅದನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನ ನಡೆಸಬೇಕಾದುದು ಎಲ್ಲಾ ಮುಸ್ಲಿಮರ ಕರ್ತವ್ಯ. ಅದಿಲ್ಲದೆ ಹೋದರೆ ಝಕಾತ್ ಕಡ್ಡಾಯಗೊಳಿಸಿರುವುದರ ಉದ್ದೇಶವೇ ಅಪೂರ್ಣವಾಗಿ ಉಳಿದು ಹೋಗುತ್ತದೆ.

